KA / BG-GPO/2515/WPP-47/2006-2008

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಫೆಬ್ರವರಿ ೦೨, ೨೦೦೬ ( ಮಾಘ ೧೩, ಶಕ ವರ್ಷ ೧೯೨೭) | ಸಂಚಿಕೆ ೫ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಬಕಾರಿ ಆಯುಕ್ತರ ಕಛೇರಿ, ಒಕ್ಕಲಿಗರ ಭವನ, ಕೆ.ಆರ್.ಸಿ. ವೃತ್ತ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಇಸಿಇ : 24 : ಕೇ. ಮಾಹಅ : 2005, ಬೆಂಗಳೂರು, ದಿನಾಂಕ: 08ನೇ ಡಿಸೆಂಬರ್ 2005.**

ಕೇಂದ್ರ ಮಾಹಿತಿ ಹಕ್ಕು ಅಧಿನಿಯಮ 2005ನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಹಕ್ಕು ಅಧಿನಿಯಮ (Central Act 22 of 2005) ಸೆಕ್ಷನ್ 5(1), 5(2), 19(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಮೇಲಿನ ಕಾಯ್ದೆಯನ್ವಯ ಅಬಕಾರಿ ಇಲಾಖೆಗೆ ಸಂಬಂಧಿಸಿದಂತೆ ಮಾಹಿತಿಯನ್ನು ಒದಗಿಸಲು 'ಸಾರ್ವಜನಿಕ ಮಾಹಿತಿ ಅಧಿಕಾರಿ' 'ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ' ಮತ್ತು 'ಮೇಲ್ಮನವಿ ಪ್ರಾಧಿಕಾರಗಳನ್ನು' ಈ ಕೆಳಕಂಡಂತೆ ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

| ಕ್ರ. ಸಂ. | ಕಛೇರಿ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5(1) ರ ಪ್ರಕಾರ ರಾಜ್ಯ ಮಟ್ಟದಲ್ಲಿ 'ಸಾರ್ವಜನಿಕ ಮಾಹಿತಿ ಅಧಿಕಾರಿ' | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5(2)ರ ಪ್ರಕಾರ ರಾಜ್ಯ ಮಟ್ಟದಲ್ಲಿ 'ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ' | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 19(1)ರ ಪ್ರಕಾರ ರಾಜ್ಯ ಮಟ್ಟದಲ್ಲಿ 'ಮೇಲ್ಮನವಿ ಪ್ರಾಧಿಕಾರಿ' |
|---|---|---|---|---|
| 1 | 2 | 3 | 4 | 5 |
| 1 | ಅಬಕಾರಿ ಆಯುಕ್ತರ ಕಛೇರಿ ಬೆಂಗಳೂರು | ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್ (ಆಡಳಿತ), ಅಬಕಾರಿ ಆಯುಕ್ತರ ಕಛೇರಿ | 1ನೇ ಕೇಂದ್ರ ಸಹಾಯಕರು ಅಬಕಾರಿ ಆಯುಕ್ತರ ಕಛೇರಿ | ಅಬಕಾರಿ ಜಂಟಿ ಆಯುಕ್ತರು (ಆಡಳಿತ ಮತ್ತು ಕೇಂದ್ರಸ್ಥಾನ) ಅಬಕಾರಿ ಆಯುಕ್ತರ ಕಛೇರಿ |
| 2 | ಅಬಕಾರಿ ಜಂಟಿ ಆಯುಕ್ತರ ಕಛೇರಿ, ರಾಜ್ಯ ವಿಚಕ್ಷಣ ದಳ, ಬೆಂಗಳೂರು | ಅಬಕಾರಿ ಜಂಟಿ ಆಯುಕ್ತರು ರಾಜ್ಯ ವಿಚಕ್ಷಣ ದಳ ಬೆಂಗಳೂರು | ಅಬಕಾರಿ ಅಧೀಕ್ಷಕರು ಅಬಕಾರಿ ಜಂಟಿ ಆಯುಕ್ತರ ಕಛೇರಿ ರಾಜ್ಯ ವಿಚಕ್ಷಣ ದಳ, ಬೆಂಗಳೂರು | ಅಬಕಾರಿ ಆಯುಕ್ತರು ಕರ್ನಾಟಕ ರಾಜ್ಯ |
| 3 | ವಿಭಾಗಗಳ ಜಾರಿ ಮತ್ತು ತನಿಖೆಯ ಜಂಟಿ ಆಯುಕ್ತರ ಕಛೇರಿ | ಸಂಬಂಧಪಟ್ಟ ವಿಭಾಗಗಳ ಜಾರಿ ಮತ್ತು ತನಿಖೆ ಅಬಕಾರಿ ಜಂಟಿ ಆಯುಕ್ತರು | ಸಂಬಂಧಪಟ್ಟ ವಿಭಾಗಗಳ ಕೇಂದ್ರಸ್ಥಾನದ ಜಿಲ್ಲಾ ಅಬಕಾರಿ ಅಧೀಕ್ಷಕರು, ವಿಚಕ್ಷಣ ದಳ<br>ಅಬಕಾರಿ ಅಧೀಕ್ಷಕರು ಜಯನಗರ ಇ.ಐ.ಬಿ. (ಬೆಂಗಳೂರು ವಿಭಾಗಕ್ಕೆ ಸಂಬಂಧಿಸಿದಂತೆ) | ಅಬಕಾರಿ ಆಯುಕ್ತರು ಕರ್ನಾಟಕ ರಾಜ್ಯ |
| 4 | ಅಬಕಾರಿ ಅಧೀಕ್ಷಕರು ಕಛೇರಿ ಜಿಲ್ಲಾ ವಿಚಕ್ಷಣ ದಳ | ಅಬಕಾರಿ ಅಧೀಕ್ಷಕರು ವಿಚಕ್ಷಣ ದಳ | ಅಬಕಾರಿ ನಿರೀಕ್ಷಕರು ಅಬಕಾರಿ ಅಧೀಕ್ಷಕರ ಕಛೇರಿ ಜಿಲ್ಲಾ ವಿಚಕ್ಷಣ ದಳ | ಸಂಬಂಧಪಟ್ಟ ವಿಭಾಗಗಳ ಜಾರಿ ಮತ್ತು ತನಿಖೆ ಅಬಕಾರಿ ಜಂಟಿ ಆಯುಕ್ತರು |
| 5 | ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿ | ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್ | ಅಬಕಾರಿ ಉಪ ಅಧೀಕ್ಷಕರು ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್ ಕಛೇರಿ | ಜಿಲ್ಲಾಧಿಕಾರಿಗಳು |

| 1 | 2 | 3 | 4 | 5 |
|---|---|---|---|---|
| 6 | ಅಬಕಾರಿ ಉಪ ವಿಭಾಗಗಳ ಕಛೇರಿ | ಅಬಕಾರಿ ಉಪ ಅಧೀಕ್ಷಕರು ಉಪ ವಿಭಾಗ | ಅಬಕಾರಿ ಉಪ ನಿರೀಕ್ಷಕರು (ಹಿರಿಯ) ಅಬಕಾರಿ ಉಪ ಅಧೀಕ್ಷಕರ ಕಛೇರಿ | ಅಬಕಾರಿ ಅಧೀಕ್ಷಕರು ಜಿಲ್ಲಾ ವಿಚಕ್ಷಣ ದಳ |
| 7 | ಅಬಕಾರಿ ನಿರೀಕ್ಷಕರ ಕಛೇರಿ | ಅಬಕಾರಿ ನಿರೀಕ್ಷಕರು | | ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್ |
| 8 | ತಾಲ್ಲೂಕು (ಜಾರಿ ಮತ್ತು ತನಿಖೆ) ಕಛೇರಿ | ಅಬಕಾರಿ ಉಪ ನಿರೀಕ್ಷಕರು (ಹಿರಿಯ) | | ಸಂಬಂಧಪಟ್ಟ ತಾಲ್ಲೂಕು (ಜಾರಿ ಮತ್ತು ತನಿಖೆ) ವ್ಯಾಪ್ತಿಯ ಅಬಕಾರಿ ಉಪ ಅಧೀಕ್ಷಕರು ಉಪ ವಿಭಾಗ |

ಮೇಲ್ಕಂಡ ಪ್ರಾಧಿಕಾರಗಳು 2005ರ ಮಾಹಿತಿ ಹಕ್ಕು ಕಾಯ್ದೆ (2005ರ ಕೇಂದ್ರ ಕಾಯ್ದೆ 22) ರ ಅನ್ವಯ ಸಾರ್ವಜನಿಕರಿಗೆ ನಿಗದಿತ ಅವಧಿಯಲ್ಲಿ ಮಾಹಿತಿ ಒದಗಿಸಲು ಕ್ರಮ ಕೈಗೊಳ್ಳಲು ಸೂಚಿಸಲಾಗಿದೆ.

ಪಿ.ಆರ್. 1997 ಅಬಕಾರಿ ಆಯುಕ್ತರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರ ಕಾರ್ಯಾಲಯ**

**ಅಧಿಭಾರ ಅರ್ಜಿ ಸಂಖ್ಯೆ : 5 : 2004 - 2005,**

**ಅರ್ಜಿದಾರರು :**
ವ್ಯವಸ್ಥಾಪಕರು,
ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್ ನಿ.,
ಯಳನಡು, ಚಿಕ್ಕನಾಯಕನಹಳ್ಳಿ ತಾಲ್ಲೂಕು

**ವಿರುದ್ಧ**

**ಎದುರು ಅರ್ಜಿದಾರರು :**
ಜಿ. ಎ. ಸಿದ್ದರಾಮಯ್ಯ,
ಮಾಜಿ ಮಾರಾಟ ಗುಮಾಸ್ತ
ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್ (ನಿ)
ಯಳನಡು, ಚಿಕ್ಕನಾಯಕನಹಳ್ಳಿ ತಾಲ್ಲೂಕು.

**ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 103 ರ ಮೇರೆಗೆ ಹೊರಡಿಸಿದ ತೀರ್ಪು ಮುನ್ನ ಜಪ್ತಿ ಆಜ್ಞೆ :**

**ಪ್ರಸ್ತಾವನೆ :**

ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್ (ನಿ) ಯಳನಡು ಚಿಕ್ಕನಾಯಕನಹಳ್ಳಿ ತಾಲ್ಲೂಕು ಇದರ ಮಾಜಿ ಮಾರಾಟ ಗುಮಾಸ್ತರಾದ ಜಿ ಎ ಸಿದ್ದರಾಮಯ್ಯ ಇವರು ಬ್ಯಾಂಕ್‌ನಲ್ಲಿ ಮಾರಾಟ ಗುಮಾಸ್ತರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಬ್ಯಾಂಕ್‌ನ ದಾಸ್ತಾನು ಮೌಲ್ಯ ರೂ. 224692-27 ಗಳನ್ನು ದುರುಪಯೋಗ ಪಡಿಸಿಕೊಂಡಿದ್ದರ ಮೇರೆಗೆ ವಸೂಲಾತಿಗಾಗಿ ಸದರಿಯವರ ವಿರುದ್ಧ ಸಹಕಾರ ಸಂಘಗಳ ಕಾಯಿದೆ ಕಲಂ 69 ರಡಿಯಲ್ಲಿ ಅಧಿಭಾರ ಅರ್ಜಿ ದಾಖಲು ಮಾಡಿದ್ದು ಪ್ರಕರಣದ ವಿಚಾರಣೆ ನಡೆಯುತ್ತಿರುತ್ತದೆ.

ಅರ್ಜಿದಾರರು ದುರುಪಯೋಗದ ಮೊತ್ತಕ್ಕೆ ತಕ್ಕ ಮೌಲ್ಯದ ಎದುರು ಅರ್ಜಿದಾರರ ಸ್ಥಿರಾಸ್ತಿಯನ್ನು ತೀರ್ಪು ಮುನ್ನ ನ್ಯಾಯಾಲಯದ ವ್ಯಾಪ್ತಿಗೆ ಒಳಪಡಿಸಿ ಜಪ್ತಿಗೊಳಿಸುವಂತೆ ಮನವಿ ಸಲ್ಲಿಸಿದ್ದರ ಮೇರೆಗೆ ಎದುರು ಅರ್ಜಿದಾರರ ಅಧಿಸೂಚನೆಯಲ್ಲಿ ಸೂಚಿಸಿರುವ ಸ್ಥಿರಾಸ್ತಿಯನ್ನು ಷರತ್ತು ಸಹಿತ ತೀರ್ಪು ಮುನ್ನ ಜಪ್ತಿಗೊಳಿಸಿ ದಿನಾಂಕ: 23.9.2005 ರಂದು ಆದೇಶ ಹೊರಡಿಸಲಾಗಿತ್ತು. ಅದರಂತೆ ಎದುರು ಅರ್ಜಿದಾರರು ನಿಗಧಿತ ಸಮಯದೊಳಗೆ ಷರತ್ತು ಪೂರೈಸಲು ವಿಫಲರಾಗಿದ್ದರಿಂದ ತೀರ್ಪು ಮುನ್ನ ಜಪ್ತಿ ಆಜ್ಞೆಯನ್ನು ಸ್ಥಿರೀಕರಿಸುವುದು ಅಗತ್ಯವೆಂದು ಮನಗಂಡು ಸ್ಥಿರೀಕರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ನಂ: ಸನಿ-34 : ಡಿಡಿಎಸ್ : ಕಲಂ 103 : 34 : 05-06, ದಿನಾಂಕ: 19ನೇ ನವೆಂಬರ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಆದ ನಾನು ಸಹಕಾರ ಸಂಘಗಳ ಕಾಯಿದೆ ಕಲಂ 103 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ : 69 : ಸಿಎಲ್ಎಂ : 2001 ದಿನಾಂಕ: 21.11.2001 ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸುತ್ತಾ ಈ ಕೆಳಗೆ ಕಾಣಿಸಿರುವ ಎದುರು ಅರ್ಜಿದಾರರ ಸ್ಥಿರಾಸ್ತಿಯನ್ನು ದಿನಾಂಕ: 23.9.2005 ರಂದು ಹೊರಡಿಸಿದೆ. ಷರತ್ತು ಸಹಿತ ತೀರ್ಪು ಮುನ್ನ ಜಪ್ತಿ ಆಜ್ಞೆಯನ್ನು ಸ್ಥಿರೀಕರಿಸಲಾಗಿದೆ ಎಂದು ಆದೇಶಿಸಿದೆ.

ಈ ಕೆಳಕಂಡ ಸ್ಥಿರಾಸ್ತಿಯನ್ನು ಪಡೆಯುವ ಅಥವಾ ಖರೀದಿಸುವ ದಾನ ಪಡೆಯುವ ಮತ್ತು ಇನ್ನಾವುದೇ ರೀತಿ ವ್ಯಕ್ತಿ ಅಥವಾ ಸಂಸ್ಥೆಗಳು ಹೊಂದಿದರೆ ಸಿಂಧುವಾಗುವುದಿಲ್ಲವೆಂದು ಸಾರ್ವಜನಿಕರಲ್ಲಿ ತಿಳಿಯಪಡಿಸಿದೆ.

ಜಪ್ತಿ ಆಜ್ಞೆಗೆ ಒಳಗಾದ ಸ್ಥಿರಾಸ್ತಿಗಳ ವಿವರ :

| ಕ್ರ. ಸಂ. | ಹಕ್ಕುದಾರರ ಹೆಸರು | ಸ್ಥಿರಾಸ್ತಿ ಇರುವ ಗ್ರಾಮ | ಹೋಬಳಿ ತಾಲ್ಲೂಕು | ಖಾತೆ ನಂ | ವಿಸ್ತೀರ್ಣ | ತರಹೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಜಿ ಎ ಸಿದ್ದರಾಮಯ್ಯ ಬಿನ್ ಅಜಪ್ಪ | ಯಳನಡು | ಚಿಕ್ಕನಾಯಕನಹಳ್ಳಿ ತಾ ಹುಳಿಯಾರು ಹೋಬಳಿ | ಅಸೆಸ್‌ಮೆಂಟ್ ನಂ: 401 : 719 | 15 x 23 | ಮನೆ |
| 2 | ಸಿದ್ದರಾಮಯ್ಯ ಬಿನ್ ಬೀರಯ್ಯ | ಬೆಟ್ಟರಹಳ್ಳಿ | -,,- | ಸರ್ವೆ ನಂ. 14:2 | 1.01 | ಖುಷ್ಕಿ |
| 3 | ಸಿದ್ರಾಮಯ್ಯ ಬಿನ್ ಜಡಿಯಪ್ಪನ ಸಿದ್ದರಾಮಯ್ಯ | -,,- | -,,- | 14:2 | 1.01 | ಖುಷ್ಕಿ |

| 1 | 2 | 3 | 4 | 5 | 6 | 7 |
|---|---|---|---|---|---|---|
| 4 | ಸಿದ್ದರಾಮಯ್ಯ ಬಿನ್ ಬೀರಯ್ಯ | ಬೆಟ್ಟರಹಳ್ಳಿ | ಚಿಕ್ಕನಾಯಕನಹಳ್ಳಿ ತಾ ಹುಳಿಯಾರು ಹೋಬಳಿ | 10:5 | 2.25 | ಖುಷ್ಕಿ |
| 5 | ಸಿದ್ದರಾಮಯ್ಯ ಬಿನ್ ಜಡಿಯಪ್ಪನ ಸಿದ್ದರಾಮಯ್ಯ | -,,- | -,,- | 11:5 | 0.11 | ಖುಷ್ಕಿ |

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿ: 19.11.2005 ರಂದು ನೀಡಿದೆ.

ಪಿ.ಆರ್. 1998

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತಿಪಟೂರು ಉಪವಿಭಾಗ, ತಿಪಟೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರ ಕಾರ್ಯಾಲಯ

**ಅಧಿಭಾರ ಅರ್ಜಿ ಸಂಖ್ಯೆ : 4 : 2004 - 2005,**

**ಅರ್ಜಿದಾರರು :**
ವ್ಯವಸ್ಥಾಪಕರು,
ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್ (ನಿ).,
ಯಳನಡು, ಚಿಕ್ಕನಾಯಕನಹಳ್ಳಿ ತಾಲ್ಲೂಕು

**ವಿರುದ್ಧ**

**ಎದುರು ಅರ್ಜಿದಾರರು :**
ಎಂ. ಸಿದ್ಧರಾಮಯ್ಯ,
ಮಾಜಿ ವ್ಯವಸ್ಥಾಪಕರು,
ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್ (ನಿ)
ಯಳನಡು, ಚಿಕ್ಕನಾಯಕನಹಳ್ಳಿ ತಾಲ್ಲೂಕು.

**ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 103 ರ ಮೇರೆಗೆ ಹೊರಡಿಸಿದ ತೀರ್ಪು ಮುನ್ನ ಜಪ್ತಿ ಆಜ್ಞೆ :**

**ಪ್ರಸ್ತಾವನೆ :**

ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್ (ನಿ) ಯಳನಡು ಚಿಕ್ಕನಾಯಕನಹಳ್ಳಿ ತಾಲ್ಲೂಕು ಇದರ ಮಾಜಿ ವ್ಯವಸ್ಥಾಪಕರಾದ ಎಂ ಸಿದ್ಧರಾಮಯ್ಯ, ಇವರು ಬ್ಯಾಂಕ್‌ನಲ್ಲಿ ವ್ಯವಸ್ಥಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಬ್ಯಾಂಕ್‌ನ ಹಣ ರೂ. 125860-41 ಗಳನ್ನು ದುರುಪಯೋಗ ಪಡಿಸಿಕೊಂಡಿದ್ದರ ಮೇರೆಗೆ ವಸೂಲಾತಿಗಾಗಿ ಸದರಿಯವರ ವಿರುದ್ಧ ಸಹಕಾರ ಸಂಘಗಳ ಕಾಯಿದೆ ಕಲಂ 69 ರಡಿಯಲ್ಲಿ ಅಧಿಭಾರ ಅರ್ಜಿ ದಾಖಲು ಮಾಡಿದ್ದು ಪ್ರಕರಣಕ್ಕೆ ವಿಚಾರಣೆಯಲ್ಲಿರುತ್ತದೆ.

ಅರ್ಜಿದಾರರು ದುರುಪಯೋಗದ ಮೊತ್ತಕ್ಕೆ ತಕ್ಕ ಮೌಲ್ಯದ ಎದುರು ಅರ್ಜಿದಾರರ ಸ್ಥಿರಾಸ್ತಿಯನ್ನು ತೀರ್ಪು ಮುನ್ನ ನ್ಯಾಯಾಲಯದ ವ್ಯಾಪ್ತಿಗೆ ಒಳಪಡಿಸಿ ಜಪ್ತಿಗೊಳಿಸುವಂತೆ ಮನವಿ ಸಲ್ಲಿಸಿದ್ದರ ಮೇರೆಗೆ ಎದುರು ಅರ್ಜಿದಾರರ ಅಧಿಸೂಚನೆಯಲ್ಲಿ ಸೂಚಿಸಿರುವ ಸ್ಥಿರಾಸ್ತಿಯನ್ನು ಷರತ್ತು ಸಹಿತ ತೀರ್ಪು ಮುನ್ನ ಜಪ್ತಿಗೊಳಿಸಿ ದಿನಾಂಕ: 17.9.2005 ರಂದು ಆದೇಶ ಹೊರಡಿಸಲಾಗಿತ್ತು. ಅದರಂತೆ ಎದುರು ಅರ್ಜಿದಾರರು ನಿಗಧಿತ ಸಮಯದೊಳಗೆ ಷರತ್ತು ಪೂರೈಸಲು ವಿಫಲರಾಗಿದ್ದರಿಂದ ತೀರ್ಪು ಮುನ್ನ ಜಪ್ತಿ ಆಜ್ಞೆಯನ್ನು ಸ್ಥಿರೀಕರಿಸುವುದು ಅಗತ್ಯವೆಂದು ಮನಗಂಡು ಸ್ಥಿರೀಕರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ನಂ: ಸನಿ-34 : ಡಿಡಿಎಸ್ : ಕಲಂ 103 : 33 : 2005-06, ದಿನಾಂಕ: ನೇ ನವೆಂಬರ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಆದ ನಾನು ಸಹಕಾರ ಸಂಘಗಳ ಕಾಯಿದೆ ಕಲಂ 103 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ : 69 : ಸಿಎಲ್‌ಎಂ : 2001 ದಿನಾಂಕ: 21.11.2001 ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸುತ್ತಾ ಈ ಕೆಳಗೆ ಕಾಣಿಸಿರುವ ಎದುರು ಅರ್ಜಿದಾರರ ಸ್ಥಿರಾಸ್ತಿಯನ್ನು ದಿನಾಂಕ: 17.9.2005 ರಂದು ಹೊರಡಿಸಿದ ಷರತ್ತು ಸಹಿತ ತೀರ್ಪು ಮುನ್ನ ಜಪ್ತಿ ಆಜ್ಞೆಯನ್ನು ಸ್ಥಿರೀಕರಿಸಲಾಗಿದೆ ಎಂದು ಆದೇಶಿಸಿದೆ.

ಈ ಕೆಳಕಂಡ ಸ್ಥಿರಾಸ್ತಿಯನ್ನು ಪಡೆಯುವ ಅಥವಾ ಖರೀದಿಸುವ ದಾನ ಪಡೆಯುವ ಅಥವಾ ಇನ್ನಾವುದೇ ರೀತಿ ಹೊಂದುವ ವ್ಯಕ್ತಿ ಅಥವಾ ಸಂಸ್ಥೆಗಳು ಹೊಂದಿದರೆ ಸಿಂಧುವಾಗುವುದಿಲ್ಲವೆಂದು ಸಾರ್ವಜನಿಕರಲ್ಲಿ ತಿಳಿಯಪಡಿಸಿದೆ.

ಜಪ್ತಿ ಆಜ್ಞೆಗೆ ಒಳಗಾದ ಸ್ಥಿರಾಸ್ತಿಗಳ ವಿವರ :

| ಕ್ರ. ಸಂ. | ಹಕ್ಕುದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಹೋಬಳಿ ತಾಲ್ಲೂಕು | ಖಾತೆ ನಂ | ವಿಸ್ತೀರ್ಣ | ತರಹೆ |
|---|---|---|---|---|---|---|
| 1 | ಎಂ ಸಿದ್ಧರಾಮಯ್ಯ | ಚಿಕ್ಕನಾಯಕನಹಳ್ಳಿ | ಚಿಕ್ಕನಾಯಕನಹಳ್ಳಿ ಪುರಸಭೆಯ 1ನೇ ಡಿವಿಜನ್ ಬ್ರಾಹ್ಮಣರ ಬೀದಿ | 169 : 154 2050 ಮನೆ | 21 x 45 | ಎ ಸಿ ಷಡ್ |

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 19.11.2005 ರಂದು ನೀಡಿದೆ.

ಪಿ.ಆರ್. 1999

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತಿಪಟೂರು ಉಪವಿಭಾಗ, ತಿಪಟೂರು.

## ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ

**ವಿಷಯ:** ಚಿತ್ರದುರ್ಗ ತಾಲ್ಲೂಕಿನ ಸಮಾಪನೆಗೊಂಡಿರುವ ಹಿರೇಕಬ್ಬಿಗೆರೆ ವ್ಯವಸಾಯ ಸೇವಾ ಸಹಕಾರ ಸಂಘವನ್ನು ಪುನಃಶ್ಚೇತನ ಗೊಳಿಸುವ ಬಗ್ಗೆ

**ಉಲ್ಲೇಖ:** ಈ ಕಛೇರಿಯ ಆದೇಶದ ಸಂಖ್ಯೆ: ಡಿಆರ್‌ಡಿ : ಎಲ್‌ಕ್ಯೂಡಿ : ಸಿಆರ್ 39 : 98-99, ದಿನಾಂಕ: 23.9.88.
2) ಸಹಕಾರ ಸಂಘಗಳ ನಿರೀಕ್ಷಕರು ಚಿತ್ರದುರ್ಗ ತಾಲ್ಲೂಕು ಚಿತ್ರದುರ್ಗ ಇವರ ಪತ್ರದ ದಿನಾಂಕ: 10.10.2005.
3) ಸಂಘದ ಮೀಟಿಂಗ್ ನಡುವಳಿಕೆ ದಿನಾಂಕ: 12.10.2005.

**ಪ್ರಸ್ತಾವನೆ :**

ಚಿತ್ರದುರ್ಗ ತಾಲ್ಲೂಕು ಹಿರೇಕಬ್ಬಿಗೆರೆ, ವ್ಯವಸಾಯ ಸೇವಾ ಸಹಕಾರ ಸಂಘವನ್ನು ಮೇಲ್ಕಂಡ ಉಲ್ಲೇಖಿತ ಪತ್ರದನ್ವಯ ಸಮಾಪನೆಗೊಳಿಸಲಾಗಿರುತ್ತದೆ. ಈ ಸಹಕಾರ ಸಂಘದ ಕಾರ್ಯ ವ್ಯಾಪ್ತಿಗೆ, ಒಟ್ಟು 9 ಗ್ರಾಮಗಳು, ಸೇರಿರುತ್ತವೆ. ಈ ಒಂಬತ್ತು ಗ್ರಾಮಗಳನ್ನು

ಸಂಘವನ್ನು ಸಮಾಪನೆಗೊಳಿಸಿದ ನಂತರ ತಾಲ್ಲೂಕಿನ ಯಾವುದೇ ವ್ಯವಸಾಯ ಸೇವಾ ಸಹಕಾರ ಸಂಘ ಕಾರ್ಯವ್ಯಾಪ್ತಿಗೆ ಒಳಪಡಿಸದೆ, ಇರುವುದರಿಂದ ಈ ವ್ಯಾಪ್ತಿಯ ಗ್ರಾಮಗಳ ರೈತರಿಗೆ, ಜಿಲ್ಲಾ ಬ್ಯಾಂಕಿನಿಂದ ಸಿಗಬಹುದಾದ ಕಿರ್ಸಾನ್ ಕ್ರೆಡಿಟ್ ಸಾಲ ಶೇ. 6 ಬಡ್ಡಿ ರಿಯಾಯ್ತಿ ಸಾಲ ಬಡ್ಡಿ ಮನ್ನಾ ಯೋಜನೆಯ ಸಾಲ ಸೌಲಭ್ಯಗಳಿಂದ, ವಂಚಿತರಾಗಿರುತ್ತಾರೆ. ಈ ಎಲ್ಲಾ ಸೌಲಭ್ಯಗಳನ್ನು ಸರ್ಕಾರದಿಂದ ಹಾಗೂ ಬ್ಯಾಂಕಿನಿಂದ ಪಡೆಯುವ ಉದ್ದೇಶಕ್ಕೆ ಸಂಘವನ್ನು ಪುನಃಶ್ಚೇತನಗೊಳಿಸಬೇಕೆಂದು, ಉಲ್ಲೇಖ (3) ರ ನಡುವಳಿಕೆಯಲ್ಲಿ ಸಂಘದ ವ್ಯಾಪ್ತಿಯಲ್ಲಿ ಬರುವ ರೈತ ಸದಸ್ಯರು, ನಿರ್ಧರಿಸಿ, ಸಂಘವನ್ನು ಪುನಃಶ್ಚೇತನಗೊಳಿಸಬೇಕೆಂದು, ಕೋರಿಕೊಂಡಿರುತ್ತಾರೆ, ಸದರಿ ಪ್ರಸ್ತಾವನೆಯನ್ನು ಚಿತ್ರದುರ್ಗ ತಾ. ಸಹಕಾರ ಸಂಘಗಳ ನಿರೀಕ್ಷಕರು, ಉಲ್ಲೇಖ (2) ರ ಪತ್ರದ ಪ್ರಕಾರ ಶಿಫಾರಸ್ಸು ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಬೇಕೆಂದು, ತೀರ್ಮಾನಿಸಿ, ಈ ಕೆಳಕಂಡ ಷರತ್ತುಗಳೊಡನೆ, ಈ ಕೆಳಕಂಡಂತೆ ಆದೇಶ ನೀಡಲಾಗಿರುತ್ತದೆ.

**ಆದೇಶ ಸಂ: ಡಿಆರ್‌ಡಿ : ಎಂಕೆಟಿ : ಎಲ್‌ಕ್ಯೂಡಿ : ಸಿಆರ್-9 : ಪುನಃಶ್ಚೇತನ : 05-06, ದಿನಾಂಕ: 21ನೇ ಅಕ್ಟೋಬರ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಸಹಕಾರ ಸಂಘಗಳ ಕಾಯ್ದೆ ಕಲಂ 72(3) ರ ಪ್ರಕಾರ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ : 243 : ಸಿಎಲ್‌ಎಂ : 91 : ದಿನಾಂಕ: 21.11.2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಚಿತ್ರದುರ್ಗ ಜಿಲ್ಲೆ, ಸಹಕಾರ ಸಂಘಗಳ ಉಪ ನಿಬಂಧಕರಾದ ಶ್ರೀಮತಿ ಟಿ.ಓ. ಸುನಂದಮ್ಮ ಆದ ನಾನು ಚಿತ್ರದುರ್ಗ ತಾಲ್ಲೂಕು ಹಿರೇಕಬ್ಬಿಗೆರೆ, ವ್ಯವಸಾಯ ಸೇವಾ ಸಹಕಾರ ಸಂಘವನ್ನು ಉಲ್ಲೇಖ (1) ರ ಮೇರೆಗೆ ಆದೇಶಿಸಲಾದ, ಪರಿಸಮಾನ ಆದೇಶವನ್ನು ರದ್ದುಪಡಿಸಿ, ಸಂಘದ ಪುನಃಶ್ಚೇತನಕ್ಕೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಆದೇಶಿಸಲಾಗಿರುತ್ತದೆ.

**ಷರತ್ತುಗಳು :**

1 ಉಲ್ಲೇಖ (3) ರ ಪ್ರಕಾರ, ನಡೆಸಲಾಗಿರುವ ಮೀಟಿಂಗ್ ನಡುವಳಿಕೆ ಪ್ರಕಾರ : ಸಂಘದ ಪುನಃಶ್ಚೇತನ ಸಮಿತಿ ರೂಪಿಸಿರುವ ಕ್ರಿಯಾಯೋಜನೆಯಂತೆ, 500 ಜನ ಸದಸ್ಯರಿಂದ ರೂ. 0.50 ಷೇರು ಬಂಡವಾಳವನ್ನು ಶೇಖರಿಸಿ, ಸಂಘದ ಎಸ್.ಬಿ. ಖಾತೆಯಲ್ಲಿ ಜಮಾ ಮಾಡತಕ್ಕದ್ದು,

2 0.50 ರೂ. ಷೇರು ಶೇಖರಣ ಆದ ನಂತರ ಸಂಘದ ಸಮಾಪನಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಸಭೆಯನ್ನು ಕರೆದು ಆಡಳಿತ ಮಂಡಳಿಯನ್ನು ಪುನರ್‌ಸ್ಥಾಪಿಸತಕ್ಕದ್ದು, ಆಡಳಿತ ಮಂಡಳಿಗೆ ರಚನೆಗೆ ಚುನಾವಣಾಧಿಕಾರಿಯೂ ಚಿತ್ರದುರ್ಗ ತಾಲ್ಲೂಕಿನ ಸಹಕಾರ ಸಂಘಗಳ ನಿರೀಕ್ಷಕರನ್ನು ನೇಮಿಸಲಾಗಿರುತ್ತದೆ, ನಿಯಮಿಸಲಾದ ಚುನಾವಣಾಧಿಕಾರಿಯವರು, ಸಹಕಾರಿ ಕಾಯ್ದೆ ಕಲಂ 14ರ ಪ್ರಕಾರ, ಚುನಾವಣಾ ವೇಳಪಟ್ಟಿಯನ್ನು ನಮೂದಿಸಿ ಸಂಘಕ್ಕೆ ಮೊದಲನೇ ಆಡಳಿತ ಮಂಡಳಿಯನ್ನು ರಚಿಸಲು ಆದೇಶಿಸಲಾಗಿದೆ.

3 ಉಲ್ಲೇಖ (3) ರಂತೆ ನಡೆಸಲಾಗಿರುವ ಗ್ರಾಮಸಭೆ ತೀರ್ಮಾನದ ಪ್ರಕಾರ, ಸಂಘದ ಪುನರ್‌ಶ್ಚೇತನಕ್ಕೆ ಹಾಗೂ ಸಮಾಪಕರಿಗೆ ಸಹಾಯ ಮಾಡಲು ಕಾಲ್ಗೆರೆ ವ್ಯವಸಾಯ ಸೇವಾ ಸಹಕಾರ ಸಂಘದ ಕಾರ್ಯದರ್ಶಿಯ ನೆರವು ಕೇಳಿದ್ದು, ಸದರಿಯವರು ಸೇವೆಯನ್ನು ಪಡೆದು ಸಂಘದ ಷೇರು ಸಂಗ್ರಹಣೆ ಕ್ರಮವಿಡಲು ಸೂಚಿಸಲಾಗಿರುತ್ತದೆ.

ಈ ಆದೇಶವನ್ನು ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ: 8.10.2005 ರಂದು ನೀಡಲಾಗಿರುತ್ತದೆ.

ಪಿ.ಆರ್. 2000

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯದಲ್ಲಿ, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ**

**ದಾವೆ ಸಂಖ್ಯೆ: 46 / 98- 99**

| **ವಾದಿ :** | **ವಿರುದ್ಧ** | **ಪ್ರತಿವಾದಿ :** |
|---|---|---|
| ಕಾರ್ಯದರ್ಶಿ<br>ಇಲತೊರೆ ಹಾಲು ಉತ್ಪಾದಕರ ಸಹಕಾರ ಸಂಘ ನಿ.<br>ದೇವನಹಳ್ಳಿ ತಾಲ್ಲೂಕು | | ಶ್ರೀ ಪಿ. ಮಂಜುನಾಥ<br>ಬಿನ್ ಪಿಳ್ಳ ಮುನಿಯಪ್ಪ,<br>ಮಾಜಿ ಕಾರ್ಯದರ್ಶಿ,<br>ಇಲತೊರೆ ಹಾಲು ಉತ್ಪಾದಕರ ಸಹಕಾರ ಸಂಘ ನಿ.<br>ದೇವನಹಳ್ಳಿ ತಾಲ್ಲೂಕು. |

**ಸ್ಥಿರಾಸ್ತಿಯನ್ನು ಆದೇಶಕ್ಕಿಂತ ಪೂರ್ವದಲ್ಲಿ ಜಪ್ತಿ ಮಾಡುವ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ರನ್ವಯ ನೀಡಿರುವ ನೋಟೀಸು**

ಈ ನ್ಯಾಯಾಲಯದಲ್ಲಿ ದಾಖಲಾಗಿರುವ ದಾವೆಯಲ್ಲಿ ಪ್ರತಿವಾದಿಯಾದ ಶ್ರೀ ಪಿ. ಮಂಜುನಾಥ್ ಬಿನ್ ಪಿಳ್ಳಮುನಿಯಪ್ಪ ರವರು ಸದರಿ ಸಂಘದ 1997-98ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯಂತೆ ರೂ. 1,17,590-83 ಗಳನ್ನು ಹಣ ದುರುಪಯೋಗ ಮಾಡಿರುವುದಾಗಿ ತಿಳಿಸುತ್ತಾ, ಸದರಿ ಮೊಬಲಗನ್ನು ವಸೂಲಿ ಮಾಡಲು ಆದೇಶ ನೀಡಲು ವಾದಿಯು ಕೋರಿರುತ್ತಾರೆ.

ಅರ್ಜಿದಾರರು ಅರ್ಜಿಯನ್ನು ಸಲ್ಲಿಸಿ, ಸದರಿ ಅರ್ಜಿಯು ಇತ್ಯರ್ಥವಾಗಲು ವಿಳಂಬವಾಗುವ ಸಾಧ್ಯತೆ ಇರುವುದರಿಂದ ಪ್ರತಿವಾದಿಗಳು ಹೊಂದಿರುವ ಸ್ಥಿರಾಸ್ತಿಯನ್ನು ಪರಭಾರೆ ಮಾಡಿದಲ್ಲಿ ಪ್ರತಿವಾದಿಗಳು ಹಣ ದುರುಪಯೋಗ ಮಾಡಿರುವ ಮೊಬಲಗನ್ನು ವಸೂಲಿ ಮಾಡಲು ಸಾಧ್ಯವಾಗುವುದಿಲ್ಲವೆಂದು ತಿಳಿಸುತ್ತಾ, ಪ್ರತಿವಾದಿ ಹೊಂದಿರುವ ಕೆಳಗೆ ಸೂಚಿಸಿರುವ ಸ್ಥಿರಾಸ್ತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103ರನ್ವಯ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಕೋರಿರುತ್ತಾರೆ.

**ಆದೇಶ**

ಮೇಲ್ಕಂಡ ಅಂಶಗಳನ್ನು ಪರಿಗಣಿಸಿ, ಎಂ.ಡಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡ ಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ / 69 / ಸಿ.ಎಲ್.ಎಂ. / 2001, ದಿನಾಂಕ: 21.11.2001 ರನ್ವಯ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಪ್ರತಿವಾದಿ ಹೊಂದಿರುವ ಈ ಕೆಳಕಂಡ ಅನುಬಂಧದಲ್ಲಿ ಸೂಚಿಸಿರುವ ಸ್ಥಿರಾಸ್ಥಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುತ್ತಾ, ಈ ಬಗ್ಗೆ ಪ್ರತಿವಾದಿಯು ಈ ಆದೇಶ

ತಲುಪಿದ 15 ದಿನಗಳೊಳಗಾಗಿ ಮುಟ್ಟುಗೋಲು ಹಾಕಿಕೊಂಡಿರುವ ಆಸ್ತಿಯ ಮೌಲ್ಯಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆಯನ್ನು (ಕ್ಯಾಷ್ ಸೆಕ್ಯೂರಿಟಿ) ನೀಡಿ ಸದರಿ ಆದೇಶವನ್ನು ಹಿಂತೆಗೆದುಕೊಳ್ಳಲು ಕೋರಬಹುದೆಂದು ಅವಕಾಶ ನೀಡಲಾಗಿದೆ. ತಪ್ಪಿದಲ್ಲಿ ಮುಟ್ಟುಗೋಲು ಹಾಕಿಕೊಳ್ಳಲು ನೀಡಿರುವ ಈ ಆದೇಶವನ್ನು ಸ್ಥಿರಗೊಳಿಸಲಾಗುವುದೆಂದು ಹಾಗೂ ಈ ಸ್ಥಿರಾಸ್ತಿಯನ್ನು ಮಾರಾಟ ಮಾಡಲಾಗಲಿ, ಉಡುಗೊರೆ ಹಾಗೂ ಇತರೆ ಕಾರಣಗಳಿಂದ ಪರಭಾರೆ ಮಾಡಲು ನಿಷೇಧಿಸಲಾಗಿದೆ.

ಈ ಆದೇಶವನ್ನು ಧಿಕ್ಕರಿಸಿ ಕೆಳಕಂಡ ಸ್ಥಿರಾಸ್ತಿಯನ್ನು ಯಾವುದೇ ರೀತಿಯಲ್ಲಿ ಪರಭಾರೆ ಮಾಡಿದ್ದನ್ನು ಸ್ವೀಕರಿಸಿದ್ದಲ್ಲಿ ಅದಕ್ಕೆ ಅವರೇ ಸ್ವಂತ ಜವಾಬ್ದಾರರಾಗಿರುತ್ತಾರೆ.

| ಕ್ರ. ಸಂ | ಸ್ಥಿರಾಸ್ತಿಗಳ ವಿವರ | ಸರ್ವೆ ನಂ | ವಿಸ್ತೀರ್ಣ ಎಕರೆ - ಗುಂಟೆ | ಸ್ಥಳ |
|---|---|---|---|---|
| 1 | ವ್ಯವಸಾಯ ಜಮೀನು (ಖುಷ್ಕಿ) | 34 / 2 | 2 - 20 | ಇಲ್‌ತೊರೆ, ಕುಂದಾಣ ಹೋಬಳಿ, ದೇವನಹಳ್ಳಿ ತಾ: |

ಈ ಆದೇಶವನ್ನು ನನ್ನ ಸಹಿ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ: 05.12.2005 ರಂದು ಹೊರಡಿಸಲಾಗಿದೆ.

**ಎಂ.ಡಿ. ನರಸಿಂಹಮೂರ್ತಿ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ.

ಪಿ.ಆರ್. 2001

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಸಾಗರ ವಿಭಾಗ, ಸಾಗರ

## ತಿದ್ದುಪಡಿ ಆದೇಶ

**ಕ್ರ. ಸಂ. ಬಿ3. ಅಮೊ. ವಾಹನ. 05 / 04-05, ದಿನಾಂಕ: 06ನೇ ಡಿಸೆಂಬರ್ 2005.**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಕಛೇರಿಯಿಂದ ದಿ: 26.10.2005ರಂದು ಹೊರಡಿಸಿದ ಆದೇಶ ಬಿ3.ಅಮೊ.ವಾಹನ. 05 / 05-06 ಈ ರೀತಿ ತಿದ್ದುಪಡಿ ಆದೇಶ ಹೊರಡಿಸಿದೆ. ಆರೋಪಿಗಳ ಹೆಸರು ಪ್ರಸ್ತಾವನೆ ಭಾಗದಲ್ಲಿ (1) ನಿಸಾರ್ ಅಹಮ್ಮದ್ ಬಿನ್ ಸಾಬ್‌ಜಾನ್, ಹಾನಂಬಿ ರಸ್ತೆ, ಸಾಗರ (2) ಸೀತಾರಾಮ್ ಬಿನ್ ಗಂಗಾನಾಯಕ್ 30 ವರ್ಷ, ಗವಟೂರು ಗ್ರಾಮ, ಹೊಸನಗರ ತಾಲ್ಲೂಕು (3) ಪುರುಷೋತ್ತಮ ಬಿನ್ ವೆಂಕನಾಯಕ್ ನೆಹರು ನಗರ, ರಿಪ್ಪನ್ ಪೇಟೆ, ಹೊಸನಗರ ತಾಲ್ಲೂಕು ಎಂಬುದಾಗಿ ಮತ್ತು ಆದೇಶದ ಭಾಗದಲ್ಲಿ ವಾಹನ ಕೆಎ-17-ಎಂ-6978 ರಲ್ಲಿದ್ದ ಒಂದು ಬೀಟೆ ತುಂಡಿನ ಅಳತೆಯ 4 1/2 ಅಡಿ ಉದ್ದ ಮತ್ತು 4 ಅಡಿ ಸುತ್ತಳತೆಯ 0.121ಎಂ3 ನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಳ್ಳಲಾಗಿದೆಂದು ಆದೇಶದಲ್ಲಿ ಓದಿಕೊಳ್ಳಲು ಕೋರಿದೆ.

ಪಿ.ಆರ್. 2003

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

## ಪ್ರಾಥಮಿಕ ಅಧಿಸೂಚನೆ

**ನಂ : ಜಿನಕೋ SLM ಸಿ.ಆರ್. 11 / 2005-06, ದಿನಾಂಕ: 30ನೇ ನವೆಂಬರ್ 2005.**

ಶಿವಮೊಗ್ಗ ನಗರಸಭೆ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಸದರಿ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿ ಇದ್ದು, ಹಾಗೂ ಜನ ಸಂದಣಿಯಿಂದ ಕೂಡಿದ್ದು, ಹಾಲಿ ಇರುವ ಗುಡಿಸಲು / ಕಟ್ಟಡಗಳು ದುರಸ್ತಿ ಇಲ್ಲದೇ, ಕುಡಿಯುವ ನೀರು, ದೀಪ, ರಸ್ತೆ, ಚರಂಡಿ, ಶೌಚಾಲಯ, ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೆ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯಕರ ವಾತಾವರಣದಿಂದ ಕೂಡಿರುವುದಾಗಿ ಕೊಳಚೆ ನಿರ್ಮೂಲನಾ ಮಂಡಳಿಯ ಅಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ. ಈ ಪ್ರದೇಶವು ತಗ್ಗು ಜಾಗದಲ್ಲಿದ್ದು ಜನ ಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯಕರವಾದ ವಾತಾವರಣವನ್ನು ಹೊಂದಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯಿದೆ 1973ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸುವುದು ಅತ್ಯಾವಶ್ಯಕವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಮೇಲ್ಕಂಡ ಕಾರಣಗಳಿಂದ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. **HUD 49 MCS** 85 ದಿನಾಂಕ 17.04.1976ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ಪ್ರದತ್ತವಾಗಿರುವ ಅಧಿಕಾರದಂತೆ ಈ ಕೆಳಗಿನ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯಿದೆ 1973ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಲಾಗಿದೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಹಾಗೂ ಈ ಪ್ರದೇಶದ ಹಿತಾಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದಲ್ಲಿ ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 15 ದಿನಗಳೊಳಗಾಗಿ ದ್ವಿಪ್ರತಿಯಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರಿಗೆ ಸಲ್ಲಿಸಬಹುದಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ ಸಂ. | ಪ್ರದೇಶದ ಹೆಸರು ಮತ್ತು ಸದರಿ ಪ್ರದೇಶವು ಇರುವ ಸ್ಥಳದ ವಿವರ | ಪ್ರಸ್ತಾಪಿತ ಪ್ರದೇಶವು ಇರುವ ಜಾಗದ ಮಾಲೀಕರ ಹೆಸರು | ಪ್ರಸ್ತಾಪಿತ ಪ್ರದೇಶವು ಇರುವ ಜಾಗದ ವಿವರ | | |
|---|---|---|---|---|---|
| | | | ತಾಲ್ಲೂಕು / ಗ್ರಾಮ / ಸ. ನಂ. | ವಿಸ್ತೀರ್ಣ ಎಕರೆ ಗುಂಟೆ | ಚಕ್ಕುಬಂದಿ |
| 1 | ಶಿವಮೊಗ್ಗ ನಗರ ಕುಂಬಾರಗುಂಡಿ ಕೊಳಚೆ ಪ್ರದೇಶ | ನಗರಸಭೆ, ಶಿವಮೊಗ್ಗ | ಶಿವಮೊಗ್ಗ ತಾಲ್ಲೂಕು ನಗರಸಭೆ ಅಸೆಸ್‌ಮೆಂಟ್ ನಂ. 783 | 2.38 | ಪೂರ್ವಕ್ಕೆ ಮಾಡ್ರನ್ ಟಾಕೀಸ್ ನಿಂದ ಹೊಳೆಗೆ ಸೇರು ಚರಂಡಿ ಪಶ್ಚಿಮಕ್ಕೆ ಮಂಜುನಾಥ ಚಿತ್ರಮಂದಿರ, ಬಿ.ಬಿ. ಸ್ಟ್ರೀಟ್ ಸ್ಕೂಲ್ ರಸ್ತೆ, ಮಹಾಕವಿ ಕಾಳಿದಾಸ ರಸ್ತೆ |

| 1 | 2 | 3 | 4 | 5 | 6 |
|---|---|---|---|---|---|
| 1 | ಶಿವಮೊಗ್ಗ ನಗರ ಕುಂಬಾರಗುಂಡಿ ಕೊಳಚೆ ಪ್ರದೇಶ | ನಗರಸಭೆ, ಶಿವಮೊಗ್ಗ | ಶಿವಮೊಗ್ಗ ತಾಲ್ಲೂಕು ನಗರಸಭೆ ಅಸೆಸ್‌ಮೆಂಟ್ ನಂ. 783 | 2.38 | ಉತ್ತರಕ್ಕೆ ಶ್ರೀನಿವಾಸ ಅಯ್ಯಂಗಾರ್, ನರಸಿಂಗರಾವ್ ಮತ್ತು ಶ್ರೀಧರ್ ರವರ ಖಾಸಗೀ ಮನೆ<br>ದಕ್ಷಿಣಕ್ಕೆ ಚನ್ನಪ್ಪಸ್ವಾಮಿ ಮಠದ ರಸ್ತೆ |

ಪಿ.ಆರ್. 2004

ಜಿಲ್ಲಾಧಿಕಾರಿ,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಶಿಕ್ಷಣ ಇಲಾಖೆ

**ಅಧಿಸೂಚನೆ, ಸಂಖ್ಯೆ : ಇಡಿ 116 ಡಿಟಿಇ 2004, ಬೆಂಗಳೂರು, ದಿನಾಂಕ: 07ನೇ ಡಿಸೆಂಬರ್ 2005.**

ಚಿಂತಾಮಣಿಯ ಸರ್ಕಾರಿ ಪಾಲಿಟೆಕ್ನಿಕ್‌ನ ಯಾಂತ್ರಿಕ ಇಂಜಿನಿಯರಿಂಗ್ ಉಪನ್ಯಾಸಕಿ ಶ್ರೀಮತಿ ಜಿ.ಆರ್. ಕವಿತ ರವರು ದಿನಾಂಕ: 29.11.2003 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಖಾಯಂ ಪೂರ್ವ ಸೇವಾ ಅವಧಿಯಲ್ಲಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಅವರು ನೇಮಕಗೊಂಡ ಹುದ್ದೆಗೆ ಅರ್ಹರಲ್ಲವೆಂದು ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಾವಳಿಗಳು 1977ರ ಉಪ ನಿಯಮ 6ರ ಅಡಿಯಲ್ಲಿ ದಿನಾಂಕ: 29.11.2003 ರಿಂದ ಜಾರಿಗೆ ಬರುವಂತೆ ಅವರನ್ನು ಸೇವೆಯಿಂದ ವಿಮೋಚನೆಗೊಳಿಸಲಾಗಿದೆ.

ಪಿ.ಆರ್. 2005

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಸ್. ವೇಣುಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-1, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು - ಇವರ ನ್ಯಾಯಾಲಯ

**ಅಧಿಸೂಚನೆ, ಸಂಖ್ಯೆ: ಡಬ್ಲ್ಯೂಸಿಎ / ಸಿಆರ್. 44 / 05F , ದಿನಾಂಕ: 13ನೇ ಸೆಪ್ಟೆಂಬರ್ 2005**

**ಅರ್ಜಿದಾರರು :**
ಶ್ರೀ ಗೊಡ್ಡುಮರಿ ವೆಂಕಟೇಶ್
ಸನ್ ಆಫ್ ವೆಂಕಟಪ್ಪ,
ರಂಗಮಾನಯಾನಹಳ್ಳಿ
ಪುತ್ಲೂರು ಮಂಡಲಮ
ತಾಡಪತ್ರಿ ತಾಲೂಕು
ಅನಂತಪುರ ಜಿಲ್ಲೆ, ಆಂಧ್ರಪ್ರದೇಶ

**ವಿರುದ್ಧ**

**ಪ್ರತಿವಾದಿಗಳು :**
ಶ್ರೀ ವೆಂಕಟೇಶ್ವರ ರೆಡ್ಡಿ ಎಂ.ಕೆ.
ಸೋಮಿ ರೆಡ್ಡಿ 1-129 ಎ
ಗಣೇಶ ನಗರ, ತಾಡಪತ್ರಿ
ಅನಂತಪುರ ಜಿಲ್ಲೆ, ಆಂಧ್ರ ಪ್ರದೇಶ,
2) ರೋಯಲ್ ಸುಂದರಮ್ ಅಲೈಯನ್ಸಸ್
ಇನ್ಸುರೆನ್ಸ್ ಕಂ ಲಿ. 46, ವೈಟ್ಸ್ ರೋಡ್
ಚೆನ್ನೈ 600014

ಅರ್ಜಿದಾರನಾದ ಶ್ರೀ ಗೊಡ್ಡುಮರಿ ವೆಂಕಟೇಶ್ ಇವರು ತಮ್ಮ ಶ್ರೀ ಲಕ್ಷ್ಮಿನಾರಾಯಣ ಇವರು 1ನೇ ಪ್ರತಿವಾದಿಗಳಾದ ಶ್ರೀ ವೆಂಕಟೇಶ್ವರ ರೆಡ್ಡಿ, ಅನಂತಪುರ ಜಿಲ್ಲೆ, ಆಂಧ್ರಪ್ರದೇಶ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 31.3.2005 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ / ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**

ಪಿ.ಆರ್. 2006

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ-1, ಮಂಗಳೂರು.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-1, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು - ಇವರ ನ್ಯಾಯಾಲಯ

**ಅಧಿಸೂಚನೆ, ಸಂಖ್ಯೆ: ಡಬ್ಲ್ಯೂಸಿಎ / ಸಿಆರ್. 48 / 05R , ದಿನಾಂಕ: 13ನೇ ಸೆಪ್ಟೆಂಬರ್ 2005**

**ಅರ್ಜಿದಾರರು :**
ಶ್ರೀಮತಿ ಪ್ರೇಮಾ
ದಿ ಸುರೇಶ್ ನಾಯ್ಕ್ ಪತ್ನಿ
ಮಾಗಲಿಸ್ಸ ಗೇಟ್ ಜಪ್ಪು,
ಮಂಗಳೂರು

**ವಿರುದ್ಧ**

**ಪ್ರತಿವಾದಿಗಳು :**
1. ಶ್ರೀ ಚರಣ್ ಶೆಟ್ಟಿ
   ಬಿನ್ ಕೋಚಪ್ಪ ಚೆಟ್ಟಿ
   ನಾರನಪ್ಪ ಕಂಪೌಂಟಿ ಪಿ ಎಲ್ ಗೇಟ್
   ಜಪ್ಪು ಮಂಗಳೂರು.
2. ನ್ಯಾಷನಲ್ ಇನ್ಸುರೆನ್ಸ್ ಕಂ ಲಿ
   ಬಂಟ್ವಾಳ ಬ್ರಾಂಚ್, ಗಣೇಶ ಬಿಲ್ಡಿಂಗ್
   ಬಿ.ಸಿ. ರೋಡ್.

ಅರ್ಜಿದಾರಳಾದ ಶ್ರೀಮತಿ ಪ್ರೇಮಾ ಇವರು ತಮ್ಮ ಗಂಡನಾದ ಶ್ರೀ ಸುರೇಶ್ ನಾಯ್ಕ್ ಇವರು 1ನೇ ಪ್ರತಿವಾದಿಗಳಾದ ಶ್ರೀ ಚರಣ್ ಶೆಟ್ಟಿ, ಜಪ್ಪು, ಮಂಗಳೂರು ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 28.5.2005 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ / ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ-1, ಮಂಗಳೂರು.

ಪಿ.ಆರ್. 2007

**ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ರಾಜಾಜಿನಗರ ಬೆಂಗಳೂರು (ಪಶ್ಚಿಮ) ಇವರ ನಡವಳಿ**

**ಉಪಸ್ಥಿತರು:** ಶ್ರೀ ಡಾ|| ಸಿ.ಟಿ. ಮೂರ್ತಿ
ನೊಂದಣಿ ಪ್ರಾಧಿಕಾರ ಹಾಗೂ
ಪ್ರಾದೇಶಿಕ ಸಾರಿಗೆ ಅಧಿಕಾರಿ,
ರಾಜಾಜಿನಗರ, ಬೆಂಗಳೂರು (ಪಶ್ಚಿಮ).

**ವಿಷಯ:** ಮೋಟಾರು ವಾಹನ ಸಂಖ್ಯೆ ಕೆಎ-02-ಎ-3314 ಆಟೋರಿಕ್ಷಾ ಕ್ಯಾಬ್ ನೊಂದಣಿ ರದ್ದು ಪಡಿಸುವ ಕುರಿತು.

**ಉಲ್ಲೇಖ:** 1) ವಾಹನ ಮಾಲೀಕರ ಅರ್ಜಿ ದಿನಾಂಕ 13.06.2005.
2) ವಾಹನ ನಿರೀಕ್ಷಕರ ವರದಿ ದಿನಾಂಕ 08.11.2005.

**ಪ್ರಸ್ತಾವನೆ :**

ಮೇಲ್ಕಂಡ ವಿಷಯ ಹಾಗೂ ಉಲ್ಲೇಖದನ್ವಯ ವಾಹನ ಸಂಖ್ಯೆ ಕೆಎ-02-ಎ-3314 ರ ವಾಹನದ ಮಾಲೀಕರಾದ ಶ್ರೀ ಸುರೇಶ್, ಬಿನ್. ನಾರಾಯಣ ಗೌಡ. # 445, 8ನೇ ಮೈನ್, 4ನೇ ಹಂತ, ಬಸವೇಶ್ವರ ನಗರ, ಬೆಂಗಳೂರು-79, ಇವರು ದಿನಾಂಕ 13.06.2005 ರ ಅರ್ಜಿಯನ್ನು ಸಲ್ಲಿಸಿ ವಾಹನದ ನೊಂದಣಿಯನ್ನು ರದ್ದುಪಡಿಸಲು ಕೋರಿದ್ದಾರೆ. ಹಾಗೂ ವಾಹನ ನಿರೀಕ್ಷಕರು ದಿನಾಂಕ 08.11.2005 ರಂದು ವಾಹನ ನೊಂದಣಿ ರದ್ದುಪಡಿಸಬಹುದೆಂದು ಶಿಫಾರಸ್ಸು ಮಾಡಿದ್ದಾರೆ. ವಾಹನದ ಅರ್ಹತಾ ಪತ್ರ ದಿನಾಂಕ 11.06.2005 ರ ವರೆಗೆ ಚಾಲ್ತಿಯಲ್ಲಿದ್ದು ಜೀವಾವಧಿ ತೆರಿಗೆಯನ್ನು ಪಾವತಿಸಿರುತ್ತಾರೆ.

ಆದುದರಿಂದ ಈ ಕೆಳಕಂಡ ವಾಹನದ ನೊಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸಂ: ಪ್ರಾ.ಸಾ.ಅ.ಬೆಂ (ಪ) ಕೆಎ-02-ಎ-3314 / 05-06, ದಿನಾಂಕ: 10ನೇ ನವೆಂಬರ್ 2005**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55 (2) ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಡಾ|| ಸಿ.ಟಿ. ಮೂರ್ತಿ, ಪ್ರಾದೇಶಿಕ ಸಾರಿಗೆ ಅಧಿಕಾರಿ, ರಾಜಾಜಿನಗರ, ಬೆಂಗಳೂರು (ಪಶ್ಚಿಮ) ಆದ ನಾನು, ವಾಹನ ಸಂಖ್ಯೆ: ಕೆಎ-02-ಎ-3314 ಆಟೋರಿಕ್ಷಾ ವಾಹನದ ನೊಂದಣಿ ಹಾಗೂ ನೊಂದಣಿ ಪ್ರಮಾಣ ಪತ್ರವನ್ನು ರದ್ದುಗೊಳಿಸಿರುತ್ತೇನೆ. ಹಾಗೂ ಯಾವುದಾದರೂ ಬಾಕಿ ಕಂಡುಬಂದಲ್ಲಿ ವಾಹನ ಮಾಲೀಕರೆ ಪಾವತಿಮಾಡತಕ್ಕದ್ದು ಎಂಬ ಷರತ್ತಿನೊಂದಿಗೆ ನೊಂದಣಿಯನ್ನು ದಿನಾಂಕ: 10.11.2005 ರಿಂದ ಜಾರಿಗೆ ಬರುವಂತೆ ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | |
|---|---|
| 1. ವಾಹನ ಸಂ | : ಕೆಎ-02-ಎ-3314 |
| 2. ನೊಂದಣಿ ದಿನಾಂಕ | : 07.08.1996 |
| 3. ಆಸನ ಸಾಮರ್ಥ್ಯ | : 3+1 |
| 4. ವಾಹನದ ವರ್ಗ | : ಆಟೋರಿಕ್ಷಾ |
| 5. ತಯಾರಕರ ಹೆಸರು | : ಗ್ರೀವ್ಸ್ ಲಿಮಿಟೆಡ್ |
| 6. ಚಾಸಿಸಸ್ ಸಂಖ್ಯೆ | : ICE017141 |
| 7. ಇಂಜಿನ್ ಸಂಖ್ಯೆ | : RG14242E6 |
| 8. ವಾಹನ ಮಾಲೀಕರ ಹೆಸರು | ಶ್ರೀ ಸುರೇಶ್, ಬಿನ್ ನಾರಾಯಣ ಗೌಡ, # 445, 8ನೇ ಮುಖ್ಯ ರಸ್ತೆ, 3ನೇ ಹಂತ, 4ನೇ ಬ್ಲಾಕ್, ಬಸವೇಶ್ವರನಗರ, ಬೆಂಗಳೂರು-79. |

ಪ್ರಾದೇಶಿಕ ಸಾರಿಗೆ ಅಧಿಕಾರಿ,
ರಾಜಾಜಿನಗರ, ಬೆಂಗಳೂರು (ಪಶ್ಚಿಮ)

ಪಿ.ಆರ್. 2015

**ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ರಾಜಾಜಿನಗರ ಬೆಂಗಳೂರು (ಪಶ್ಚಿಮ) ಇವರ ನಡವಳಿ**

**ಉಪಸ್ಥಿತರು:** ಶ್ರೀ ಡಾ|| ಸಿ.ಟಿ. ಮೂರ್ತಿ
ನೊಂದಣಿ ಪ್ರಾಧಿಕಾರ ಹಾಗೂ
ಪ್ರಾದೇಶಿಕ ಸಾರಿಗೆ ಅಧಿಕಾರಿ,
ರಾಜಾಜಿನಗರ, ಬೆಂಗಳೂರು (ಪಶ್ಚಿಮ).

**ವಿಷಯ:** ಮೋಟಾರು ವಾಹನ ಸಂಖ್ಯೆ MEK-8266 ಹೆಚ್‌ಜಿವಿ ನೊಂದಣಿ ರದ್ದು ಪಡಿಸುವ ಕುರಿತು.

**ಉಲ್ಲೇಖ:** 1) ವಾಹನ ಮಾಲೀಕರ ಅರ್ಜಿ ದಿನಾಂಕ 14.09.2005.

2) ವಾಹನ ನಿರೀಕ್ಷಕರ ವರದಿ ದಿನಾಂಕ 15.10.2005.

**ಪ್ರಸ್ತಾವನೆ :**

ಮೇಲ್ಕಂಡ ವಿಷಯ ಹಾಗೂ ಉಲ್ಲೇಖದನ್ವಯ ವಾಹನ ಸಂಖ್ಯೆ MEK-8266 ಹೆಚ್‌ಜಿವಿ ರ ವಾಹನದ ಮಾಲೀಕರಾದ ಶ್ರೀ ಡಿ. ಕೆಂಚಪ್ಪ, ಎಸ್.ಪಿಆರ್ ಗ್ರೂಪ್, # 34/2, 5ನೇ ಮೈನ್, ಬಿಂದು ನರಸಿಂಗ್ ಹೋಂ, ಗಾಂಧಿನಗರ, ಬೆಂಗಳೂರು-09, ಇವರು ದಿನಾಂಕ 14.09.2005 ರಲ್ಲಿ ಅರ್ಜಿಯನ್ನು ಸಲ್ಲಿಸಿ ವಾಹನದ ನೊಂದಣಿಯನ್ನು ರದ್ದುಪಡಿಸಲು ಕೋರಿದ್ದಾರೆ. ಹಾಗೂ ವಾಹನ ನಿರೀಕ್ಷಕರು ದಿನಾಂಕ 15.10.2005 ರಂದು ವಾಹನ ನೊಂದಣಿ ರದ್ದುಪಡಿಸಬಹುದೆಂದು ಶಿಫಾರಸ್ಸು ಮಾಡಿದ್ದಾರೆ. ವಾಹನದ ಅರ್ಹತಾ ಪತ್ರ ದಿನಾಂಕ 17.08.2002 ರ ವರೆಗೆ ಚಾಲ್ತಿಯಲ್ಲಿದ್ದು ತೆರಿಗೆಯನ್ನು 31.07.2003 ರ ವರೆಗೆ ಪಾವತಿಸಿರುತ್ತಾರೆ.

ಆದುದರಿಂದ ಈ ಕೆಳಕಂಡ ವಾಹನದ ನೊಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸಂ: ಪ್ರಾ.ಸಾ.ಅ.ಬೆಂ (ಪ) MEK-8266 ಹೆಚ್‌ಜಿವಿ / 05-06, ದಿನಾಂಕ: 19ನೇ ನವೆಂಬರ್ 2005**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55 (2) ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಡಾ॥ ಸಿ.ಟಿ. ಮೂರ್ತಿ, ಪ್ರಾದೇಶಿಕ ಸಾರಿಗೆ ಅಧಿಕಾರಿ, ರಾಜಾಜಿನಗರ, ಬೆಂಗಳೂರು (ಪಶ್ಚಿಮ) ಆದ ನಾನು, ವಾಹನ ಸಂಖ್ಯೆ: MEK-8266 ಹೆಚ್‌ಜಿವಿ ವಾಹನದ ನೊಂದಣಿ ಹಾಗೂ ನೊಂದಣಿ ಪ್ರಮಾಣ ಪತ್ರವನ್ನು ಮುಂದೆ ಯಾವುದಾದರೂ ಬಾಕಿ ಕಂಡುಬಂದಲ್ಲಿ ವಾಹನ ಮಾಲೀಕರೆ ಪಾವತಿಮಾಡತಕ್ಕದ್ದು ಎಂಬ ಷರತ್ತಿನೊಂದಿಗೆ ನೊಂದಣಿಯನ್ನು ದಿನಾಂಕ: 19.11.2005 ರಿಂದ ಜಾರಿಗೆ ಬರುವಂತೆ ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | |
|---|---|
| 1. ವಾಹನ ಸಂಖ್ಯೆ | : MEK - 8266 ಹೆಚ್‌ಜಿವಿ |
| 2. ನೊಂದಣಿ ದಿನಾಂಕ | : 03.08.1983 |
| 3. ವಾಹನದ ವರ್ಗ | : ಹೆಚ್ ಜಿ ವಿ |
| 4. ಚಾಸಿಸಸ್ ಸಂಖ್ಯೆ | : 3440737666 49 |
| 5. ಇಂಜಿನ್ ಸಂಖ್ಯೆ | : 692 D 01769289 |
| 6. ಆಸನ ಸಾಮರ್ಥ್ಯ | : 3 (ಮೂರು) |

ಪ್ರಾದೇಶಿಕ ಸಾರಿಗೆ ಅಧಿಕಾರಿ,
ರಾಜಾಜಿನಗರ, ಬೆಂಗಳೂರು (ಪಶ್ಚಿಮ)

ಪಿ.ಆರ್. 2016

**ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ರಾಜಾಜಿನಗರ ಬೆಂಗಳೂರು (ಪಶ್ಚಿಮ) ಇವರ ನಡವಳಿ**

**ಉಪಸ್ಥಿತರು:** ಶ್ರೀ ಡಾ॥ ಸಿ.ಟಿ. ಮೂರ್ತಿ
ನೊಂದಣಿ ಪ್ರಾಧಿಕಾರ ಹಾಗೂ
ಪ್ರಾದೇಶಿಕ ಸಾರಿಗೆ ಅಧಿಕಾರಿ,
ರಾಜಾಜಿನಗರ, ಬೆಂಗಳೂರು (ಪಶ್ಚಿಮ).

**ವಿಷಯ:** ಮೋಟಾರು ವಾಹನ ಸಂಖ್ಯೆ ಸಿಎಎ 7061 (ಸರಕು ವಾಹನ) ನೊಂದಣಿ ರದ್ದು ಪಡಿಸುವ ಕುರಿತು.

**ಉಲ್ಲೇಖ:** 1) ವಾಹನ ಮಾಲೀಕರ ಅರ್ಜಿ ದಿನಾಂಕ 14.09.2005.

2) ವಾಹನ ನಿರೀಕ್ಷಕರ ವರದಿ ದಿನಾಂಕ 22.09.2005.

**ಪ್ರಸ್ತಾವನೆ :**

ಮೇಲ್ಕಂಡ ವಿಷಯ ಹಾಗೂ ಉಲ್ಲೇಖದನ್ವಯ ವಾಹನ ಸಂಖ್ಯೆ ಸಿಎಎ 7061 (ಸರಕು ವಾಹನ) ರ ವಾಹನದ ಮಾಲೀಕರಾದ ಶ್ರೀ ಕೆ. ನಂದಾಕುಮಾರ ಬಿನ್. ಶ್ರೀಕೊಂಡಯ್ಯ, # 43, ಎಸ್.ಸಿ. ರಸ್ತೆ, 6ನೇ ಅಡ್ಡ ರಸ್ತೆ, ಗಾಂಧಿನಗರ, ಬೆಂಗಳೂರು-09, ಇವರು ದಿನಾಂಕ 14.09.2005 ರಲ್ಲಿ ಅರ್ಜಿಯನ್ನು ಸಲ್ಲಿಸಿ ವಾಹನದ ನೊಂದಣಿಯನ್ನು ರದ್ದುಪಡಿಸಲು ಕೋರಿದ್ದಾರೆ. ಹಾಗೂ ವಾಹನ ನಿರೀಕ್ಷಕರು ದಿನಾಂಕ 22.09.2005 ರಂದು ತಮ್ಮ ವರದಿಯಲ್ಲಿ ಈ ವಾಹನವು 3-4 ವರ್ಷಗಳಿಂದ ತೆರೆದ ಸ್ಥಳದಲ್ಲಿ ಬಿದ್ದಿದ್ದು. ಇದರ ಅಡಿಗಟ್ಟು ಕವಚ ಮತ್ತು ಇನ್ನುಳಿದ ಚಲನೆಯುಕ್ತ ಯಂತ್ರಗಳು ಸಂಪೂರ್ಣವಾಗಿ ತುಕ್ಕು ಹಿಡಿದು ಹಾಳಾಗಿರುತ್ತದೆಂದು ತಿಳಿಸಿರುತ್ತಾರೆ.

ಆದುದರಿಂದ ಈ ಕೆಳಕಂಡ ವಾಹನದ ನೊಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸಂ: ಪ್ರಾ.ಸಾ.ಅ.ಬೆಂ (ಪ) ಸಿಎಎ 7061 (ಸರಕು ವಾಹನ) / 05-06, ದಿನಾಂಕ: 24ನೇ ನವೆಂಬರ್ 2005**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55 (2) ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಡಾ॥ ಸಿ.ಟಿ. ಮೂರ್ತಿ, ಪ್ರಾದೇಶಿಕ ಸಾರಿಗೆ ಅಧಿಕಾರಿ, ರಾಜಾಜಿನಗರ, ಬೆಂಗಳೂರು (ಪಶ್ಚಿಮ) ಆದ ನಾನು, ವಾಹನ ಸಂಖ್ಯೆ: ಸಿಎಎ 7061 (ಸರಕು ವಾಹನ) ರ ವಾಹನದ ನೊಂದಣಿಯನ್ನು ದಿನಾಂಕ 24.11.2005 ರಿಂದ ಜಾರಿಮಾಡುವಂತೆ, ಮುಂದೆ ಯಾವುದಾದರೂ ತೆರಿಗೆ ಕಂಡು ಬಂದಲ್ಲಿ ಅದನ್ನು ವಾಹನ ಮಾಲೀಕರೇ ಭರಿಸತಕ್ಕದ್ದು ಎಂಬ ಷರತ್ತಿನೊಂದಿಗೆ ಈ ವಾಹನದ ನೊಂದಣಿಯನ್ನು ದಿನಾಂಕ: 24.11.2005 ರಿಂದ ಜಾರಿಗೆ ಬರುವಂತೆ ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | |
|---|---|
| 1. ವಾಹನ ಸಂಖ್ಯೆ | : ಸಿಎಎ 7061 |
| 2. ನೊಂದಣಿ ದಿನಾಂಕ | : 02.08.1989 |

| | |
|---|---|
| 3. ವಾಹನದ ವರ್ಗ | : ಸರಕು ವಾಹನ |
| 4. ಚಾಸಿಸಸ್ ಸಂಖ್ಯೆ | : ALEN 226922 |
| 5. ಇಂಜಿನ್ ಸಂಖ್ಯೆ | : ALEN 104900 |
| 6. ವಾಹನದ ತಯಾರಕರು | : ASHOK LEYLAND |
| 6. ಆಸನ ಸಾಮರ್ಥ್ಯ | : 3 + 1 = 4 |

ಪ್ರಾದೇಶಿಕ ಸಾರಿಗೆ ಅಧಿಕಾರಿ,
ಪಿ.ಆರ್. 2017 ರಾಜಾಜಿನಗರ, ಬೆಂಗಳೂರು (ಪಶ್ಚಿಮ)

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಮತ್ತು ಕಾರ್ಮಿಕ ಅಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕರಣ ಸಂಖ್ಯೆ: ಕಾಪಕ / ಸಿಆರ್ - 73:05, ದಿನಾಂಕ: 14ನೇ ಡಿಸೆಂಬರ್ 2005**

**ಅರ್ಜಿದಾರರು :**
1. ಲತಾ ಕೋಂ ದಿ: ನಟರಾಜ್
2. ಭೂಮಿಕಾ ಬಿನ್ ಲೇ: ನಟರಾಜ್
3. ದಿಕ್ಷೀತಾ ಬಿನ್ ದಿ: ನಟರಾಜ್
4. ಸುಂದಮ್ಮ ಕೋಂ ಓಂಕಾರಪ್ಪ

**ಇವರೆಲ್ಲರ ವಾಸ :** 7ನೇ ತಿರುವು,
ಅಣ್ಣನಗರ, ಶಿವಮೊಗ್ಗ.

**ವಿರುದ್ಧ**

**ಪ್ರತಿವಾದಿಗಳು :**
1. ಗೋವಿಂದನಾಯರ,
ನಿರ್ದೇಶಕರು ಹಾಗೂ ಮಾಲೀಕರು
ಮೆ: ಮಲ್ನಾಡು ರಬ್ಬರ್ ಮ್ಯಾನೂಫ್ಯಾಕ್ಚರ್
ಪ್ರೈ ಲಿ. ಇಂಡಸ್ಟ್ರಿಯಲ್ ಎಸ್ಟೇಟ್, ಸಾಗರ ರಸ್ತೆ,
ಶಿವಮೊಗ್ಗ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ದಿ: ನಟರಾಜ್ ರವರು ಪ್ರತಿವಾದಿಯವರಲ್ಲಿ ಕೂಲಿ ಆಗಿ ಕೆಲಸದ ಮೇಲೆ ಇದ್ದಾಗ 22.09.05 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿ: 18.11.05 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ, ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 2018 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಮತ್ತು ಕಾರ್ಮಿಕ ಅಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕರಣ ಸಂಖ್ಯೆ: ಕಾಪಕ / ಸಿಆರ್ - 74:05, ದಿನಾಂಕ: 14ನೇ ಡಿಸೆಂಬರ್ 2005**

**ಅರ್ಜಿದಾರರು :**
1. ವೀಣಾ ಕೋಂ ಲೇಟ್ ಕೆ ಬಾಬು
2. ರಶ್ಮಿ ಬಿನ್ ಲೇಟ್ ಕೆ. ಬಾಬು
3. ರಾಜೇಶ್ ಬಿನ್ ಲೇಟ್ ಕೆ ಬಾಬು
4. ರಕ್ಷಿತ ಬಿನ್ ಕೆ ಬಾಬು

ಇವರೆಲ್ಲರ ವಾಸ : ಸೀಬಿನ ಕೆರೆ,
ತೀರ್ಥಹಳ್ಳಿ ಟೌನ್, ಶಿವಮೊಗ್ಗ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು :**
1. ದಿ ಛೇರ್‌ಮೆನ್
ಕೆ.ಪಿ.ಟಿ.ಸಿ.ಎಲ್. ಬೆಂಗಳೂರು
2. ದಿ ಛೇರ್‌ಮೆನ್, ಮಂಗಳೂರು ಎಲೆಕ್ಟ್ರಿಕಲ್ ಸಿಟಿ
ಸಪ್ಪೈ ಕಂಪನಿ (ಮೆಸ್ಕಾಂ)
3. ದಿ ಎಕ್ಸಿಕ್ಯೂಟೀವ್ ಇಂಜಿನಿಯರ್
ಒ ಅಂಡ್ ಎಂ ವಿಭಾಗ, ಮಂಗಳೂರು
ಎಲೆಕ್ಟ್ರಿಸಿಟಿ ಸಪ್ಪೈ ಕಂ (ಮೆಸ್ಕಾಂ) ಶಿವಮೊಗ್ಗ ಜಿಲ್ಲೆ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ದಿ: ಕೆ. ಬಾಬು ರವರು ಪ್ರತಿವಾದಿಯವರಲ್ಲಿ ಲೈನ್ ಮನ್ ಆಗಿ ಕೆಲಸದ ಮೇಲೆ ಇದ್ದಾಗ 03.04.04 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿ: 22.11.05 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ, ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 2019 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಮತ್ತು ಕಾರ್ಮಿಕ ಅಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**
**ಪ್ರಕರಣ ಸಂಖ್ಯೆ: ಕಾಪಕ / ಸಿಆರ್ - 70:05, ದಿನಾಂಕ: 15ನೇ ಡಿಸೆಂಬರ್ 2005**

**ಅರ್ಜಿದಾರರು :**
1. ಶಿವರಾಮ್ ಬಿನ್ ತಿಮ್ಮಯ್ಯ
2. ಶಾರದಮ್ಮ ಕೋಂ ಶಿವರಾಮ್
ಇವರಿಬ್ಬರ ವಿಳಾಸ: ಸುಲುಬೈಲು, ಕುರುವಳ್ಳಿ ಅಂಚೆ, ತೀರ್ಥಹಳ್ಳಿ ತಾ:, ಶಿವಮೊಗ್ಗ.

**ವಿರುದ್ಧ**

**ಪ್ರತಿವಾದಿಗಳು :**
1. ಮಹೇಶ್ ಶೆಟ್ಟಿ ಬಿನ್ ಧರ್ಮರಾಯಶೆಟ್ಟಿ ಮಾಲೀಕರು, ನ್ಯೂ ಮಾಂಡವಿ ಬಾರ್ ಅಂಡ್ ರೆಸ್ಟೋರೆಂಟ್, ಬಿ.ಹೆಚ್. ರಸ್ತೆ, ಶಿವಮೊಗ್ಗ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ದಿ: ಎಸ್.ಎಸ್. ಪ್ರಸನ್ನ ರವರು ಪ್ರತಿವಾದಿಯವರಲ್ಲಿ ಸಪ್ಲಯರ್ ಆಗಿ ಕೆಲಸದ ಮೇಲೆ ಇದ್ದಾಗ 01.05.05 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿ: 09.11.05 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ, ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 2020

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಮತ್ತು ಕಾರ್ಮಿಕ ಅಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**
**ಪ್ರಕರಣ ಸಂಖ್ಯೆ: ಕಾಪಕ / ಸಿಆರ್ - 77:05, ದಿನಾಂಕ: 14ನೇ ಡಿಸೆಂಬರ್ 2005**

**ಅರ್ಜಿದಾರರು :**
1. ರಾಜೇಶ್ವರಿ ಕೋಂ ಲೇಟ್ ಎಲ್ ವೆಂಕಟೇಶ್
2. ಅಶ್ವಿತಾ ಬಿನ್ ಲೇಟ್ ಎಲ್ ವೆಂಕಟೇಶ್
3. ಅಕ್ಷತಾ : ಬಿನ್ ಲೇಟ್ ಎಲ್ ವೆಂಕಟೇಶ್

**ವಿರುದ್ಧ**

**ಪ್ರತಿವಾದಿಗಳು :**
1. ಕೆ. ಮಹಾದೇವಿ ಕೋಂ ಎಸ್ ನಿಂಗಪ್ಪ ಎಸ್.ಬಿ.ಎಂ. ಎದುರು ಗಾರ್ಡನ್ ಏರಿಯಾ 4ನೇ ತಿರುವು ಶಿವಮೊಗ್ಗ.
2. ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ ಲಿ., ಎ.ಎ. ವೃತ್ತ, ಶಿವಮೊಗ್ಗ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ದಿ: ಎಲ್. ವೆಂಕಟೇಶ್ ರವರು ಪ್ರತಿವಾದಿಯವರಲ್ಲಿ ಚಾಲಕರಾಗಿ ಆಗಿ ಕೆಲಸದ ಮೇಲೆ ಇದ್ದಾಗ 26.04.05 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿ: 13.12.05 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ, ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 2021

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1, ಚಿಕ್ಕಮಗಳೂರು ಜಿಲ್ಲೆ.**
**ಸಂಖ್ಯೆ: ಕಾಪಕಾ : ಎಫ್ : 14 / 99, ದಿನಾಂಕ: 13ನೇ ಡಿಸೆಂಬರ್ 2005**

**ಅರ್ಜಿದಾರರು :**
1) ಶ್ರೀಮತಿ ದುಗ್ಗಮ್ಮ ಕೋಂ ಮಹಾಬಲಯ್ಯಾ (ಮೃತ ಪ್ರಭಾಕರನ ತಾಯಿ), ತುಮರಿ ಕಾರ್ಗಲ್
2) ಶ್ರೀಮತಿ ಗೌರಿಭಟ್ಟ ಮತ್ತು ಅಪ್ರಾಪ್ತ ವಯಸ್ಕರು 3 ಮಕ್ಕಳು, ಕೋಂ ಲೇಟ್ ಯು.ಎಂ. ಪ್ರಭಾಕರ, ಎಂ.ಆರ್. ಶೆಟ್ಟಿ ಕಾಂಪೌಂಡ್, ಭಟ್ಕಳ.
3) ಶ್ರೀಮತಿ ಪಿ. ಸುಮಿತ್ರ ಕೋಂ ಲೇಟ್ ಯು.ಎಂ. ಪ್ರಭಾಕರ , ಮಾಳೂರು ಗ್ರಾಮದ ನಿವಾಸಿ, ತೀರ್ಥಹಳ್ಳಿ ತಾ., ಶಿವಮೊಗ್ಗ ಜಿಲ್ಲೆ.
4) ಶ್ರೀಮತಿ ಸುರೇಖಾ 26 ವರ್ಷ ತಂದೆ ಲೇಟ್ ಪ್ರಭಾಕರ.

**ವಿರುದ್ಧ**

**ಪ್ರತಿವಾದಿಗಳು :**
ವಿಭಾಗೀಯ ನಿಯಂತ್ರಣಾಧಿಕಾರಿ
ಕೆ.ಎಸ್.ಆರ್.ಟಿ.ಸಿ. ಶಿರಸಿ ವಿಭಾಗ,
ಭಟ್ಕಳ ಡಿಪೋ, ಉತ್ತರ ಕನ್ನಡ ಜಿಲ್ಲೆ.

**ಪ್ರಕಟಣೆ**

ಪ್ರಭಾಕರ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 19.4.1999 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಅದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಆರ್.ಬಿ. ಬಾಗೇವಾಡಿ**

ಪಿ.ಆರ್. 2022

ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ
ಉಪವಿಭಾಗ-1, ಚಿಕ್ಕಮಗಳೂರು.

## ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು

**ನಮೂನೆ - 27**

**ನಂ: ಎಲ್ಎನ್‌ಡಿ : ಸಿಆರ್ : 98 : 05 - 06, ದಿನಾಂಕ: 29ನೇ ಅಕ್ಟೋಬರ್ 2005**

**94ನೇ ನಿಯಮದ 68(1) ನೇ ಪ್ರಕರಣದ ಮೇರೆಗಿನ ಘೋಷಣೆ.**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ,

1) ಈ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964 ರ 68ನೇ ಪ್ರಕರಣದ (1) ನೇ ಉಪ ಪ್ರಕರಣದಿಂದ ಪ್ರಸಿದ್ದವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸಾರ್ವಜನಿಕ ರಸ್ತೆಯ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ತಮ್ಮ ಸಾರ್ವಜನಿಕ ನಂಬರ್ ಕಾಣದ ಖರಾಬು ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2) ಸಾರ್ವಜನಿಕ ಹೆದ್ದಾರಿಯ ಹಕ್ಕಿನ ಜೊತೆಗೆ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕರು ಅಥವಾ ಯಾವನೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಭತ್ತುದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಅನ್ವೇಷಣೆಗಳನ್ನು ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥಾ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ಸ್ಪಷ್ಟ ಪರಿಹಾರಕ್ಕಾಗಿ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ತಹಶೀಲ್ದಾರ್ ಬೆಂಗಳೂರು ಉತ್ತರ ತಾಲ್ಲೂಕು ರವರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೇಮುಗಳನ್ನು ಸದರಿ ಪ್ರಕರಣದಲ್ಲಿ ಉಪ ಸಂಬಂಧಿಸಿರುವಂತೆ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | | |
|---|---|---|
| 1) | ನಂಬರ್ ಕಾಣದ ಖರಾರು ಭಾಗ ಇತ್ಯಾದಿ ಇರುವ ಗ್ರಾಮ | ಜಾಲಹಳ್ಳಿ |
| 2) | ತಾಲ್ಲೂಕು | ಬೆಂ. ಉತ್ತರ ತಾಲ್ಲೂಕು. |
| 3) | ಜಿಲ್ಲಾ | ಬೆಂಗಳೂರು ಜಿಲ್ಲಾ |
| 4) | ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | ಜಾಲಹಳ್ಳಿ ಗ್ರಾಮದ ಸರ್ವೆ ನಂ. 65 ಹಾಗೂ ಮ್ಯಾಕಲ ಚನ್ನೇನಹಳ್ಳಿ ಗಡಿಗೆ ಈ ಮಧ್ಯೆ ಇರುವ ನಂಬರ್ ಕಾಣದ ಖರಾಬು 2-21 ಜಮೀನಿನ ಪೈಕಿ 2-15 ಜಮೀನನ್ನು ಬೆಂಗಳೂರು ಮಹಾನಗರ ಪಾಲಿಕೆ ಯವರಿಗೆ ಉದ್ಯಾನವನ ನಿರ್ಮಿಸಿದ್ದು, ಖಿಲ್ಲಾ ಇರುವ ಉಳಿಕೆ 0-06 ಗುಂಟೆ ಜಮೀನು, ಶ್ರೀ ಶಂಕರ ಸೇವಾ ಸಮಿತಿ (ರಿ), ಜಾಲಹಳ್ಳಿ ರವರಿಗೆ ವೈದಿಕ ಧರ್ಮ - ಸಹಾಯ ಕೇಂದ್ರ ಸ್ಥಾಪಿಸಿ ಮಂಜೂರಾತಿ (ಅಂತಿಮ ಸಂಸ್ಕಾರಕ್ಕಾಗಿ). |
| 5) | ರಸ್ತೆಯ ಭಾಗ ಅಥವಾ ಸರಿ ಸುಮಾರು ವಿಸ್ತೀರ್ಣ | 0-06 ಗುಂಟೆ |
| | | ಪೂರ್ವಕ್ಕೆ :: ಜಾಲಹಳ್ಳಿ ಸರ್ವೆ ನಂ. 60 ರ ಜಮೀನು |
| | | ಪಶ್ಚಿಮಕ್ಕೆ :: ರಸ್ತೆ ಮತ್ತು ಮ್ಯಾಕಲ ಚನ್ನೇನಹಳ್ಳಿ ಗಡಿ |
| | | ಉತ್ತರಕ್ಕೆ :: ನಂಬರ್ ಕಾಣದ ಖರಾಬು |
| | | ದಕ್ಷಿಣಕ್ಕೆ :: ರೈಲು ಟ್ರಾಕ್ |

ಸಾರ್ವಜನಿಕ ನಂಬರ್ ಕಾಣದ ಖರಾಬು

ಪಿ.ಆರ್. 2023

ತಹಶೀಲ್ದಾರ್,
ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು.

## ನಗರಾಭಿವೃದ್ಧಿ ಇಲಾಖೆ

**ಅಧಿಸೂಚನೆ**

**ಸಂಖ್ಯೆ : ನಅಇ 438 ಮೈಅಪ್ರಾ 2005, ಬೆಂಗಳೂರು, ದಿನಾಂಕ: 08ನೇ ಡಿಸೆಂಬರ್ 2005.**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961 ರ ಪ್ರಕರಣ 5 ರಡಿಯಲ್ಲಿ ಪುತ್ತೂರು ಸ್ಥಳೀಯ ಯೋಜನಾ ಪ್ರದೇಶದ ಹಾಲಿ ಭೂ ಉಪಯೋಗದ ನಿರ್ಧರಣಾ ದಿನಾಂಕವನ್ನು ದಿನಾಂಕ : 15.7.2005 ಎಂದು ನಿಗಧಿಪಡಿಸಲಾಗಿದೆ.

ಪಿ.ಆರ್. 2024

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು**

**ನಮೂನೆ - 27**

**ಕರ್ನಾಟಕ ಭೂ ಕಂದಾಯದ ಕಾಯ್ದೆ 1964ರ ಕಲಂ 68(1) ಮತ್ತು ಕರ್ನಾಟಕ ಭೂ ಕಂದಾಯದ ನಿಯಮಗಳು 1966ರ ನಿಯಮ 94ರ ಮೇರೆಗೆ ಹೊರಡಿಸಿರುವ ಘೋಷಣೆ**

**ನಂ: ಎಲ್.ಎನ್.ಡಿ.ಸಿ.ಆರ್. 231 / 04 - 05, ದಿನಾಂಕ: 8ನೇ ಡಿಸೆಂಬರ್ 2005**

ಈ ಕೆಳಗಿನ ಪರಿಶಿಷ್ಟದಲ್ಲಿ ವಿವರಿಸಿರುವ ಸರ್ಕಾರದ ಜಮೀನುಗಳಾದ, ಸರ್ಕಾರಿ ಗುಂಡು ತೋಪು, ಗುಂಡು ತೋಪು, ಸರ್ಕಾರಿ ಖರಾಬು ಕುಂಟೆ, ದಾಸಿಕುಂಟೆ, ಜೋಗಿಕೆರೆ, ಖರಾಬು ತೋಪು ನಂಜೇಗೌಡನ ಕಟ್ಟೆ (ಗೋ ಕಟ್ಟೆ) ಮುಂತಾದ ಜಮೀನುಗಳು ಈ ಮೊದಲು ಸಾರ್ವಜನಿಕರ ಹಿತದೃಷ್ಟಿಯಿಂದ ಕಾದಿರಿಸಿರುವುದನ್ನು ಇನ್ನು ಮುಂದೆ ಸಾರ್ವಜನಿಕರ ಉಪಯೋಗಕ್ಕಾಗಿ ಅಗತ್ಯವಿರುವುದಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಮನದಟ್ಟಾಗಿರುತ್ತೆ.

1) ಆದ್ದರಿಂದ ಈಗ ಕರ್ನಾಟಕ ಭೂಕಂದಾಯದ ಕಾಯ್ದೆ 1964 ರ ಕಲಂ 68(1) ರಂತೆ ಪ್ರದತ್ತವಾದ ಅಧಿಕಾರದಂತೆ ಅಧಿಕಾರವನ್ನು ಚಲಾಯಿಸಿ ಈ ಕೆಳಗಿನ ಪರಿಶಿಷ್ಟದಲ್ಲಿ ವಿವರಿಸಿರುವ ಜಮೀನುಗಳು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯತೆ ಇರುವುದಿಲ್ಲವೆಂದು ಸದರಿ ಸರ್ಕಾರಿ ಜಮೀನುಗಳ ಮೇಲಾಗಲೀ, ಅಥವಾ ಭಾಗಶಃವಾಗಲೀ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ, ಸಂಘ, ಸಂಸ್ಥೆಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಲಾಗಿದೆ.

2) ಈ ಸರ್ಕಾರದ ಜಮೀನುಗಳ ಹಕ್ಕಿನ ಜೊತೆಗೆ, ಸದರಿ ಜಮೀನುಗಳ ಬಗ್ಗೆಯಾಗಲೀ ಭಾಗಶಃದ ಜಮೀನಿಗಾಗಲೀ ಅಥವಾ ಇವುಗಳ ಮೇಲಾಗಲಿ, ಈ ಮೊದಲು ಈ ಜಮೀನುಗಳನ್ನು ಯಾವ ಉದ್ದೇಶಗಳಾಗಿ ಕಾದಿರಿಸಲಾಗಿತ್ತೋ ಆ ವಿಷಯದ ಬಗ್ಗೆ ಆಸಕ್ತಿಯುಳ್ಳ, ಅಥವಾ ಹಕ್ಕುಳ್ಳ ಅಥವಾ ಈ ರೀತಿಯಾದ ಘೋಷಣೆಯಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ, ಇತರೇ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವ ಒಬ್ಬ ವ್ಯಕ್ತಿ, ಸಾರ್ವಜನಿಕರು, ಸಂಘ, ಸಂಸ್ಥೆಯವರು, ಈ ಘೋಷಣೆಯನ್ನು ಹೊರಡಿಸಿದ ತೊಂಬತ್ತು (90) ದಿನಗಳ ಒಳಗಾಗಿ ಸದರಿ ಘೋಷಣೆಯಿಂದ ಉಂಟಾಗಬಹುದಾದ ಪ್ರತಿಕೂಲ ಸ್ವರೂಪದ ಪರಿಣಾಮ ಹಕ್ಕಿನ ಸ್ವರೂಪ, ಪ್ರತಿಕೂಲ ಪರಿಣಾಮವು ಸಂಭವಿಸಬಹುದಾದ ರೀತಿ ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ಸ್ಪಷ್ಟ ಪರಿಹಾರಕ್ಕಾಗಿ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ತಹಸೀಲ್ದಾರ್‌ರು, ಬೆಂಗಳೂರು ದಕ್ಷಿಣ ತಾಲ್ಲೂಕುರವರಿಗೆ ಬರಹದ ಮೂಲಕ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಹಾಗೂ ಕ್ಲೇಮುಗಳನ್ನು ಸದರಿ ಪ್ರಕರಣದಲ್ಲಿ ಉಪ ಸಂಬಂಧಿಸಿದಂತೆ ತಹಸೀಲ್ದಾರರು, ಬೆಂಗಳೂರು ದಕ್ಷಿಣ ತಾಲ್ಲೂಕುರವರು ಪರಿಶೀಲಿಸತಕ್ಕದ್ದು.

**ಪರಿಶಿಷ್ಟ**

| ಕ್ರ. ಸಂ | ಗ್ರಾಮದ ಹೆಸರು | ಹೋಬಳಿ | ಸ. ನಂ. | ವಿಸ್ತೀರ್ಣ | ಚಕ್ಕುಬಂದಿ | | | | ವರ್ಗೀಕರಣ |
|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1 | 2 | 3 | 4 | 5 | 6 | 7 | 8 | 9 | 10 |
| 1. | ಕೆಂಗೇರಿ | ಕೆಂಗೇರಿ | 160 | 0-17 | ಕಂಬಿಪುರ ಗಡಿ | ಸ.ನಂ. 159 | ಸ.ನಂ. 159 | ಮೈಸೂರು ರಸ್ತೆ | ಸರ್ಕಾರಿ ಗುಂಡು ತೋಪು |
| 2. | ಕೆಂಗೇರಿ | ಕೆಂಗೇರಿ | 192 | 0-22 | ಸ.ನಂ. 191 | ಸರ್ಕಾರಿ ಹಳ್ಳ | ಸ.ನಂ. 225 | ಸ.ನಂ. 199 | ಸರ್ಕಾರಿ ಗುಂಡು ತೋಪು |
| 3. | ಕೆಂಗೇರಿ | ಕೆಂಗೇರಿ | 216 | 1-15 | ಸ.ನಂ.212 | ಸ.ನಂ. 204 | ಸ.ನಂ. 215 | ಸ.ನಂ. 212 | ನಂಜೇ ಗೌಡನ ಕಟ್ಟೆ |
| 4. | ಕೊತ್ತನೂರು | ಉತ್ತರಹಳ್ಳಿ | 73 | 0-16 | ಸ.ನಂ.74 | ರಸ್ತೆ ಮತ್ತು 73ರ ಉಳಿಕೆ | ಸ.ನಂ. 73ರ ಉಳಿಕೆ | ಸ.ನಂ. 75 | ಸರ್ಕಾರಿ ಖರಾಬು ತೋಪು |
| 5. | ಕೊತ್ತನೂರು | ಉತ್ತರಹಳ್ಳಿ | 111 | 0-25 | ಸ.ನಂ.112 | ಚುಂಚಘಟ್ಟ ಗಡಿ | ಸ.ನಂ. 105 | ಸ.ನಂ. 112 | ಗುಂಡು ತೋಪು |
| 6. | ಯಲಚೇನಹಳ್ಳಿ | ಉತ್ತರಹಳ್ಳಿ | 45 | 1-07 | ಸ.ನಂ. 44 | ಸ.ನಂ. 44 | ಸ.ನಂ. 44 | ಸ.ನಂ. 44 | ಗುಂಡು ತೋಪು |
| 7. | ವಾಜರಹಳ್ಳಿ | ಉತ್ತರಹಳ್ಳಿ | 36 | 2-31 | ಸ.ನಂ.41 | ಸ.ನಂ. 49 | ಸ.ನಂ. 41,31, 38,40 | ಸ.ನಂ.35 ಶ್ರೀನಿವಾಸ್ ರವರ ಜಮೀನು | ಖರಾಬು ಕುಂಟೆ |
| 8. | ವಾಜರಹಳ್ಳಿ | ಉತ್ತರಹಳ್ಳಿ | 14 | 1-00 | ಸ.ನಂ.23 | ಸ.ನಂ. 15 ಮತ್ತು 21 | ಸ.ನಂ. 13 | ಸ.ನಂ. 23 ಮತ್ತು 21 | ದಾಸಿಕುಂಟೆ |
| 9. | ಮಲ್ಲಸಂದ್ರ | ಉತ್ತರಹಳ್ಳಿ | 30 | 3-02 | ರಸ್ತೆ | ಸ.ನಂ. 36 & 37 | ಜುಡಿಷಿಯಲ್ ಲೇಔಟ್ &ಗುಂಡು ತೋಪು | ಖಾಸಗಿ ವಿಲೇಜ್ ಬಡಾವಣೆ ಅಚ್ಚು ಕಟ್ಟು ಇರುವುದಿಲ್ಲ | ಜೋಗಿ ಕೆರೆ |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 10. | ಮಲ್ಲಸಂದ್ರ | ಉತ್ತರಹಳ್ಳಿ | 38 | 0-28 | ಸ.ನಂ.39 | ಸ.ನಂ.37 | ಸ.ನಂ.39 | ಸ.ನಂ. 30ರ ಕೆರೆ | ಗುಂಡು ತೋಪು |
| 11. | ತಿಪ್ಪಸಂದ್ರ | ಉತ್ತರಹಳ್ಳಿ | 5 | 0-15 | ಸ.ನಂ.6 | ಸ.ನಂ.4 | ಸ.ನಂ.4 | ಸ.ನಂ.6 | ಸರ್ಕಾರಿ ಗುಂಡು ತೋಪು |
| 12. | ಬಸವನಪುರ | ಬೇಗೂರು | 12 | 0-19 | ಕೆರೆ ಮತ್ತು ಸ.ನಂ. 65 | ಬನ್ನೇರು ಘಟ್ಟ ಮುಖ್ಯ ರಸ್ತೆ | ಸ.ನಂ.11 | ಸ.ನಂ.13 | ಸರ್ಕಾರಿ ಗುಂಡು ತೋಪು |

ಪಿ.ಆರ್. 2025

ತಹಶೀಲ್ದಾರ್,
ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು.

**ಕರ್ನಾಟಕ ಲೋಕ ಸೇವಾ ಆಯೋಗ, ಬೆಂಗಳೂರು**

**ಸಂಖ್ಯೆ: ಪಶಾ(2) 286 / 05- 06 / ಪಿಎಸ್‌ಸಿ, ದಿನಾಂಕ: 15ನೇ ಡಿಸೆಂಬರ್ 2005.**

**ವಿಷಯ:** 2005ರ ಪ್ರಥಮ ದರ್ಜೆ ಸಹಾಯಕರ ನೇಮಕಾತಿ ಸಂಬಂಧ ಶ್ರೀಮತಿ ಎನ್.ಎಂ. ಚಂದ್ರಕಲಾ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಇ(2) 25 / 2005-06 / ಪಿಎಸ್‌ಸಿ ದಿನಾಂಕ: 02.06.2005
2) ಶ್ರೀಮತಿ ಚಂದ್ರಕಲಾ ಇವರ ಅರ್ಜಿ ಕ್ರಮಾಂಕ 083208
3) ಈ ಕಛೇರಿ ಹಿಂಬರಹ ಸಂಖ್ಯೆ: ಇ(2) 100 / 2005-06 / ಪಿಎಸ್‌ಸಿ, ದಿನಾಂಕ: 30.08.2005.
4) ಶ್ರೀಮತಿ ಚಂದ್ರಕಲಾ ಇವರ ಅರ್ಜಿ ಕ್ರಮ ಸಂಖ್ಯೆ: 110262.
5) ಕಾರಣ ಕೇಳುವ ನೋಟೀಸು ಸಂಖ್ಯೆ: ಪ.ಶಾ (2) 184 / 2005-06 / ಪಿಎಸ್‌ಸಿ ದಿನಾಂಕ: 05.10.2005.
6) ಶ್ರೀಮತಿ ಚಂದ್ರಕಲಾ ಇವರ ಸಮಜಾಯಿಷಿ ಪತ್ರ ದಿನಾಂಕ: 10.10.2005.

ಕ್ರಮಾಂಕ 1ರಲ್ಲಿ ಓದಲಾದ ದಿನಾಂಕ: 02.06.2005ರ ಅಧಿಸೂಚನೆಯನ್ವಯ ಶ್ರೀಮತಿ ಚಂದ್ರಕಲಾ ಎನ್.ಎಂ. ಇವರು ಪ್ರಥಮ ದರ್ಜೆ ಸಹಾಯಕರ ನೇಮಕಾತಿಯ ಸ್ಪರ್ಧಾತ್ಮಕ ಪರೀಕ್ಷೆಗೆ ಕ್ರಮ ಸಂಖ್ಯೆ 083208ರ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಸದರಿ ಅರ್ಜಿಯಲ್ಲಿ ಸಾಮಾನ್ಯ ಅರ್ಹತೆಗೆ ಗುರುತು ಮಾಡಿರುತ್ತಾರೆ. ಅವರ ಜನ್ಮ ದಿನಾಂಕದನ್ವಯ ಈ ಅಭ್ಯರ್ಥಿ ಸಾಮಾನ್ಯ ಅರ್ಹತೆಯಡಿ ವಯೋಮಿತಿ ಮೀರಿದ್ದ ಕಾರಣ ಅವರ ಅರ್ಜಿಯನ್ನು ತಿರಸ್ಕರಿಸಿ, ಕ್ರಮಾಂಕ 3ರಲ್ಲಿ ಓದಲಾದ ದಿನಾಂಕ: 30.08.2005ರ ಹಿಂಬರಹ ಜಾರಿ ಮಾಡಲಾಗಿತ್ತು.

ಸದರಿ ಹಿಂಬರಹವನ್ನು ಸ್ವೀಕರಿಸಿದ್ದಾಗ್ಯೂ ಸಹ ಸತ್ಯಾಂಶವನ್ನು ಮರೆಮಾಚಿ ಈ ಅಭ್ಯರ್ಥಿ ಪರೀಕ್ಷೆಯ ಹಿಂದಿನ ದಿನ ಆಯೋಗದ ಕಛೇರಿಯನ್ನು ಸಂಪರ್ಕಿಸಿ, ಇದುವರೆವಿಗೂ ಪ್ರವೇಶ ಪತ್ರ ತಲುಪಿಲ್ಲವೆಂದು ತಿಳಿಸಿ ಅರ್ಜಿಯ ಸ್ವೀಕೃತಿ ಭಾಗವನ್ನು ಸಲ್ಲಿಸಿದ ಕಾರಣ ಮತ್ತು ಪರೀಕ್ಷೆ ಸಮೀಪವಿದ್ದುದರಿಂದ ಯಾವುದೇ ಕೂಲಂಕಷ ಪರಿಶೀಲನೆ ಮಾಡದೇ ಕ್ರಮಾಂಕ 4ರಡಿ ಓದಲಾದ ಅರ್ಜಿಯನ್ನು ನೀಡಿ, ಅದರಿಂದ ಅದನ್ನು ಭರ್ತಿ ಮಾಡಿಸಿಕೊಂಡು ಪಡೆಯಲಾಯಿತು. ಅದರಲ್ಲಿ ಅವರು ಪ್ರವರ್ಗ 3(ಬಿ) ಮೀಸಲಾತಿಗೆ ಗುರುತು ಮಾಡಿದ್ದ ಕಾರಣ ಹಾಗೂ ಈ ಗುಂಪಿನಡಿ ವಯೋಮಿತಿ ಹೊಂದಿದ್ದರಿಂದ ನೋಂದಣಿ ಸಂಖ್ಯೆ 303145 ರಡಿ ಪರೀಕ್ಷೆಗೆ ಹಾಜರಾಗಲು ಸೂಚನೆ ನೀಡಲಾಗಿತ್ತು. ಪರೀಕ್ಷಾ ಸಮಯದಲ್ಲಿ ಸದರಿಯವರಿಂದ ತನ್ನ ಸ್ವಂತ ಜವಾಬ್ದಾರಿಯ ಮೇರೆಗೆ ಹಾಗೂ ಅಭ್ಯರ್ಥಿತನವು ಆಯೋಗದ ವಿವೇಚನೆಗೆ ಒಳಪಟ್ಟಿದ್ದು, ಆಯೋಗವು ತೆಗೆದುಕೊಳ್ಳುವ ನಿರ್ಧಾರಕ್ಕೆ ಬದ್ಧಳಾಗಿರುತ್ತೇನೆ ಎಂಬುದಾಗಿ ಅವರಿಂದ ಮುಚ್ಚಳಿಕೆ ಪಡೆದು ಪರೀಕ್ಷೆಗೆ ಅನುಮತಿಸಲಾಗಿತ್ತು.

ಸದರಿ ಪ್ರಕರಣದ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿದಾಗ ಅಭ್ಯರ್ಥಿ ತಪ್ಪು ಮಾಹಿತಿ ನೀಡಿ ಪರೀಕ್ಷೆಗೆ ಹಾಜರಾಗಿರುವುದನ್ನು ತಿಳಿದು ಬಂದಕಾರಣ ಕ್ರಮಾಂಕ 5ರಲ್ಲಿ ಓದಲಾದ ದಿನಾಂಕ 05.10.2005ರ ನೋಟೀಸಿನಲ್ಲಿ ಸದರಿ ನೇಮಕಾತಿಗೆ ಸಲ್ಲಿಸಿದ್ದ ಅರ್ಜಿಯನ್ನು ತಿರಸ್ಕರಿಸಿ ಹಿಂಬರಹ ನೀಡಿದ್ದರೂ ಈ ರೀತಿ ತಪ್ಪು ಮಾಹಿತಿ ನೀಡಿ ಸದರಿ ಪರೀಕ್ಷೆಗೆ ಪ್ರವೇಶಾವಕಾಶ ಪಡೆದು ಪರೀಕ್ಷಾ ದುರಾಚಾರವೆಸಗಿ ಆಯೋಗದ ನಿಯಮಗಳನ್ನು ಉಲ್ಲಂಘಿಸಿರುವ ಕಾರಣ, ಸದರಿ ಪರೀಕ್ಷೆಯಿಂದ ಡಿಬಾರ್ ಮಾಡುವುದಲ್ಲದೇ ಮುಂದೆ ಆಯೋಗ ನಡೆಸುವ ಯಾವುದೇ ಪರೀಕ್ಷೆಗೆ ಹಾಜರಾಗದಂತೆ ಖಾಯಂ ಆಗಿ ಡಿಬಾರ್ ಮಾಡುವ ಶಿಕ್ಷೆಯನ್ನು ವಿಧಿಸುವುದೂ ಅಲ್ಲದೇ ಕ್ರಿಮಿನಲ್ ಮೊಕದ್ದಮೆಯನ್ನು ಏಕೆ ಹೂಡಬಾರದೆಂಬುದಕ್ಕೆ ದಿನಾಂಕ 14.10.2005 ರೊಳಗಾಗಿ ಲಿಖಿತ ರೂಪದಲ್ಲಿ ಸಮಜಾಯಿಷಿ ನೀಡುವಂತೆಯೂ ತಪ್ಪಿದ್ದಲ್ಲಿ ಮೇಲಿನಂತೆ ಶಿಕ್ಷೆ ವಿಧಿಸಲಾಗುವುದೆಂದು ತಿಳಿಸಲಾಗಿತ್ತು. ದಿನಾಂಕ 10.10.2005 ರಂದು ಸದರಿ ಅಭ್ಯರ್ಥಿ ಈ ಸಂಬಂಧ ಸಲ್ಲಿಸಿದ ಸಮಜಾಯಿಷಿಯನ್ನು ಪರಿಗಣಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಪ.ಶಾ (1) / 2005-06 / ಪಿಎಸ್‌ಸಿ, ದಿನಾಂಕ: ನೇ ಡಿಸೆಂಬರ್ 2005**

ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398 / 93-94 / ಪಿಎಸ್‌ಸಿ ದಿನಾಂಕ 14.07.93 ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀಮತಿ ಚಂದ್ರಕಲಾ ಎನ್.ಎಂ. ಬಿನ್ ಮುರುಗೆಪ್ಪ ಎಸ್. 5ನೇ ಕ್ರಾಸ್, ಜೆ.ಸಿ.ಆರ್. ಬಡಾವಣೆ, ಚಿತ್ರದುರ್ಗ ಇವರಿಗೆ ಕೆಳಗಿನಂತೆ ದಂಡನೆ ವಿಧಿಸಲಾಗಿದೆ.

"2005ರ ಪ್ರಥಮ ದರ್ಜೆ ಸಹಾಯಕರ ಸ್ಪರ್ಧಾತ್ಮಕ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗಿದೆ".

ಆಯೋಗದ ಆದೇಶದ ಮೇರೆಗೆ

ಪಿ.ಆರ್. 2026

**ಬಿ.ಎಸ್. ರಾಮಪ್ರಸಾದ್**
ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ.

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ), ಕೇಂದ್ರ ಕಛೇರಿ, ಇವರ ನಡವಳಿಗಳು**

**ವಿಷಯ:** ಸ್ಥಗಿತಗೊಂಡಿರುವ ಕೊಡಗು ಜಿಲ್ಲಾ ಮೀನು ಮಾರಾಟ ಸಹಕಾರ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ ಇವರ ಪತ್ರ ಸಂಖ್ಯೆ: ಜೆಆರ್‌ಎಂ / 202 / 40 / ಡಿಎಲ್‌ಎಸ್ / 05-06 ದಿನಾಂಕ: 2.6.2005.

2) ಈ ಕಛೇರಿಯ ಇದೇ ಕ್ರಮಾಂಕದ ನೋಟೀಸ್ ದಿ: 25.8.2005.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕೊಡಗು ಜಿಲ್ಲೆ ಇವರು ನೋಟೀಸ್ ಜಾರಿ ಮಾಡಿರುವ ಪತ್ರ ಸಂಖ್ಯೆ: ಎಆರ್35 / ಎ4 / ಎಲ್‌ಕ್ಯೂಡಿ / 83 / 05-06, ದಿನಾಂಕ: 13.9.2005.

**ಪ್ರಸ್ತಾವನೆ :**

ಕೊಡಗು ಜಿಲ್ಲಾ ಮೀನು ಮಾರಾಟ ಸಹಕಾರ ಸಂಘ ನಿ, ಕೊಡಗು ಈ ಸಂಘವು ಸಂಖ್ಯೆ: 5989 / 77-78 ದಿನಾಂಕ: 3.3.1978 ರಂತೆ ನೊಂದಣಿಯಾಗಿರುತ್ತದೆ. ಇದರ ಕಾರ್ಯವ್ಯಾಪ್ತಿಯು ಜಿಲ್ಲಾ ಮಟ್ಟದಾಗಿರುತ್ತದೆ. ಸದರಿ ಸಂಘವು 1995 ರಿಂದ ಯಾವುದೇ ಕೆಲಸವನ್ನು ನಿರ್ವಹಿಸದೇ ಸ್ಥಗಿತಗೊಂಡಿರುತ್ತದೆ. 1995 ರಿಂದೀಚೆಗೆ ಯಾವುದೇ ವಾರ್ಷಿಕ ಮಹಾಸಭೆಗಳಾಗಲಿ, ಆಡಳಿತ ಮಂಡಳಿ ಸಭೆಗಳಾಗಲಿ ನಡೆದಿರುವುದಿಲ್ಲ. ಸಂಘದ ಆಡಿಟ್ 1993-94 ನೇ ಸಾಲಿನವರೆಗೆ ಆಗಿರುವುದಾಗಿ ತಿಳಿದು ಬಂದಿದ್ದು, 1986-87ನೇ ಸಾಲಿನ ಆಡಿಟ್ ವರದಿ ಮಾತ್ರ ಲಭ್ಯವಿರುತ್ತದೆ. ಸಂಘವು ಪೂರ್ಣವಾಗಿ ಸ್ಥಗಿತಗೊಂಡಿರುವುದರಿಂದ ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ ಇವರು ಸದರಿ ಸಂಘವನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಕಲಂ 72(2) ರನ್ವಯ ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಸಂಘದ ಅಧ್ಯಕ್ಷರು ಹಾಗೂ ಆಡಳಿತ ಮಂಡಳಿಯ ಸದಸ್ಯರಿಗೆ ಉಲ್ಲೇಖ (2) ರಲ್ಲಿ ನೋಟೀಸ್ ನೀಡಿ ಸದರಿ ಸಂಘವನ್ನು ಸಮಾಪನೆಗೊಳಿಸಲು ತಮ್ಮ ಆಕ್ಷೇಪಣೆ ಅಥವಾ ಹೇಳಿಕೆಯೇನಾದರೂ ಇದ್ದಲ್ಲಿ ಈ ಕಛೇರಿಗೆ ಕಳುಹಿಸಲು ತಿಳಿಸಲಾಗಿತ್ತು. ಇದುವರೆವಿಗೂ ಯಾವುದೇ ಆಕ್ಷೇಪಣೆ ಈ ಕಛೇರಿಗೆ ಸ್ವೀಕೃತವಾಗಿಲ್ಲದ್ದರಿಂದ ಸದಸ್ಯರಿಗೆ ಸಂಘವನ್ನು ಸಮಾಪನೆಗೊಳಿಸಲು ಯಾವುದೇ ಆಕ್ಷೇಪಣೆ ಇಲ್ಲವೆಂದು ಭಾವಿಸಿ ಸಂಘವನ್ನು ಸಮಾಪನೆಗೊಳಿಸಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ : ಆರ್‌ಸಿಎಸ್ / ಎಲ್‌ಕ್ಯೂಡಿ / 65 / 05-06, ದಿನಾಂಕ: 09ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಆದ ನಾನು ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ: ಸಿಎಂಡಬ್ಲ್ಯೂ / 69 / ಸಿಎಲ್‌ಎಂ / 01, ದಿನಾಂಕ: 21.11.2001 ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ದತ್ತವಾಗಿರುವ ಅಧಿಕಾರದನ್ವಯ ಕೊಡಗು ಜಿಲ್ಲಾ ಮೀನು ಮಾರಾಟ ಸಹಕಾರ ಸಂಘ ನಿ. ಕೊಡಗು ಈ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಡಿಕೇರಿ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು 15 ದಿನಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿ ಸಲ್ಲಿಸತಕ್ಕದ್ದು. ಅಲ್ಲದೆ ಸಂಘದ ಆಢಾವೆ ಪತ್ರದ ಆಧಾರದ ಮೇಲೆ ಆದ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಅನುಮತಿ ಪಡೆದು ಆಸ್ತಿಯು ವಸೂಲಾದಂತೆ ಆದ್ಯತೆ ಮೇಲೆ ಜವಾಬ್ದಾರಿ ತೀರುವಳಿ ಮಾಡಿ ಸಂಘದ ನೋಂದಣಿ ರದ್ದತಿಯ ಪ್ರಸ್ತಾವ ಸಲ್ಲಿಸಲು ಜರೂರು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಕಛೇರಿಯ ಮೊಹರಿನೊಂದಿಗೆ ದಿನಾಂಕ: 9.12.2005 ರಂದು ನೀಡಲಾಗಿದೆ.

**ಬಿ. ನಾಗರಾಜ**
ಸಹಕಾರ ಸಂಘಗಳ ಅಪರ ನಿಬಂಧಕರು,
(ಕೈಗಾರಿಕೆ ಮತ್ತು ಇತರೆ)

ಪಿ.ಆರ್. 2027

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-4,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು 560029.**
**ಸಂಖ್ಯೆ: ಡಬ್ಲ್ಯೂಸಿಎ : ಬೆಂ4 : ಎನ್‌ಎಫ್‌ಸಿ : ಸಿಆರ್ - 1:93, ದಿನಾಂಕ: 15ನೇ ಡಿಸೆಂಬರ್ 2005**

**ಅರ್ಜಿದಾರರು :**

(ಶ್ರೀ ಎಂ. ನಾಗರಾಜು - ಮೃತ)
ಮೃತನ ಅವಲಂಬಿತರುಗಳು :
1. ಶ್ರೀಮತಿ ಶಿವರತ್ನ ಕೋಂ ಲೇಟ್ ನಾಗರಾಜ್ ಎಂ. 26 ವರ್ಷ
2. ಶ್ರೀಮತಿ ಚನ್ನಮ್ಮ ಮೃತನ ತಾಯಿ, ಲೇಟ್ ಮರಿಯಪ್ಪ, 61 ವರ್ಷ
   ವಿಳಾಸ: ಕೇರಾಫ್ :
   ಶಿವರುದ್ರೇಗೌಡ,
   ನಂ. 21:80, ಅಜೀಂ ಬಿಲ್ಡಿಂಗ್, ಮಹಡಿ,
   ಕಲಾಸಿಪಾಳ್ಯ ಬಸ್ ನಿಲ್ದಾಣದ ಎದುರು,
   ಮೈನ್ ಗೇಟ್, ಎ.ವಿ. ರಸ್ತೆ,
   ಬೆಂಗಳೂರು-2.

**ವಿರುದ್ಧ**

**ಪ್ರತಿವಾದಿಗಳು :**

1. ಶಿವರುದ್ರೇಗೌಡ, ಬಿನ್ : ಲಿಂಗೇಗೌಡ,
   ನಂ. 15:17, ಟಿ ಎಸ್ ಹೆಚ್ ಬಿ,
   ಬಾಗಲೂರು ರಸ್ತೆ, ಹೊಸೂರು.
2. ಯುನೈಟೆಡ್ ಇಂಡಿಯಾ ಕಂಪನಿ ಲಿಮಿಟೆಡ್,
   ನಂ. 19-19-1, 2ನೇ ಮಹಡಿ,
   ಸೌತ್ ಎಂಡ್ ರಸ್ತೆ, ಬಸವನಗುಡಿ ರಸ್ತೆ,
   ಬಸವನಗುಡಿ ರಸ್ತೆ, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಶಿವರತ್ನ ಕೋಂ : ಲೇಟ್ ಎಂ. ನಾಗರಾಜು, ಮತ್ತು ಶ್ರೀಮತಿ ಚನ್ನಮ್ಮ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ದಿವಂಗತ ಎಂ. ನಾಗರಾಜು, ಇವರು ದಿನಾಂಕ: 22.8.2003 ರಂದು ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

